# ಗೋಕಾಕ ತಾಲೂಕು ಮತ್ತು ಜೈನಧರ್ಮ

ಎಂ. ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರೌಢ ಪ್ರಬಂಧ


ಸಂಶೋಧನೆ

ಸಂಜಯ ಎನ್. ಹಂಜೆ

ಮಾರ್ಗದರ್ಶನ

ಡಾ. ಎಸ್. ವೈ. ಸೋಮಶೇಖರ್

ಮುಖ್ಯಸ್ಥರು ಮತ್ತು ಅಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬





ಅಕ್ಟೋಬರ್ -೨೦೦೯

# ಗೋಕಾಕ ತಾಲೂಕು ಮತ್ತು ಜೈನಧರ್ಮ

ಎಂ. ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರೌಢ ಪ್ರಬಂಧ

ಸಂಶೋಧನೆ
ಸಂಜಯ ಎನ್. ಹಂಜೆ

ಮಾರ್ಗದರ್ಶನ
ಡಾ. ಎಸ್. ವೈ. ಸೋಮಶೇಖರ್
ಮುಖ್ಯಸ್ಥರು ಮತ್ತು ಅಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬

ಅಕ್ಟೋಬರ್ -೨೦೦೯

# ಸಂಶೋಧಕನ ಪ್ರಮಾಣ ಪತ್ರ

"ಗೋಕಾಕ ತಾಲೂಕು ಮತ್ತು ಜೈನಧರ್ಮ" ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು ಡಾ. ಎಸ್. ವೈ. ಸೋಮಶೇಖರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ. ಫಿಲ್. ಪದವಿಯ ಆಂಶಿಕ ಆವಶ್ಯಕತೆಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿರುತ್ತೇನೆ. ಪ್ರಸ್ತುತ ಪ್ರೌಢ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಬೇರೆ ಯಾವುದೇ ಉದ್ದೇಶಕ್ಕೆ ಅಥವಾ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೫.೧೦.೨೦೦೯

(ಸಂಜಯ ಎಸ್. ಹಂಜೆ)
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

"ಗೋಕಾಕ ತಾಲೂಕು ಮತ್ತು ಜೈನ ಧರ್ಮ" ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು ಎಂ. ಫಿಲ್. ಪದವಿಗಾಗಿ ಸಂಜಯ ಎನ್. ಹಂಜೆ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಪ್ರೌಢ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೫.೧೦.೨೦೦೯

(ಡಾ. ಎಸ್. ವೈ. ಸೋಮಶೇಖರ್)
ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಸಂಕೇತ ಸೂಚಿ

| | | |
|---|---|---|
| ಎ.ಆಯ್. | : | ಎಪಿಗ್ರಾಫಿಯ ಇಂಡಿಕ |
| ಆಯ್.ಎ. | : | ಇಂಡಿಯನ್ ಆಂಟಿಕ್ವೆರಿ |
| ಎ.ಕ. | : | ಎಪಿಗ್ರಾಫಿಯ ಕರ್ನಾಟಿಕ |
| ಎಸ್. ಆಯ್. ಆಯ್. | : | ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಶನ್ಸ್ |
| ಕ. ವಿ. ಶಾ. ಸಂ. | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಎ. ಆರ್. ಎಸ್. ಆಯ್.ಇ. | : | ಆನ್ಯುವಲ್ ರಿಪೋರ್ಟ್ಸ್ ಆನ್ ಸೌತ್ ಇಂಡಿಯನ್ ಎಪಿಗ್ರಫಿ |
| ಜೆ. ಬಿ. ಬಿ. ಆರ್. ಎ. ಎಸ್. | : | ಜರ್ನಲ್ ಆಫ್ ಬಾಂಬೆ ಬ್ರಾಂಚ್ ಆಫ್ ರಾಯಲ್ ಏಶಿಯಾಟಿಕ್ ಸೊಸೈಟಿ |
| ಶಾ.ಸಂ. | : | ಶಾಸನ ಸಂಖ್ಯೆ |
| ಕ್ರಿ.ಶ.ಸು. | : | ಕ್ರಿಸ್ತಶಕ ಸುಮಾರು |
| ಅದೇ | : | ಮೇಲಿನ ಉಲ್ಲೇಖ |
| ಪೂರ್ವೋಕ್ತ | : | ಈ ಮೊದಲು ಉಲ್ಲೇಖಿಸಿದ ಕೃತಿ/ಲೇಖನ |
| ಸಂ. | : | ಸಂಪುಟ, ಸಂಚಿಕೆ |
| ಪು. | : | ಪುಟ |
| (ಸಂ.) | : | ಸಂಪಾದಕರು |
| ಪ. ಸಂ. | : | ಪದ್ಯ ಸಂಖ್ಯೆ |
| ಅನು | : | ಅನುವಾದಕರು |

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ೧. ಪೀಠಿಕೆ

ಭಾರತದ ಇತಿಹಾಸಪೂರ್ವ ಮತ್ತು ಇತಿಹಾಸ ಕಾಲಾವಧಿಗಳ ವಿವಿಧ ಸಾಂಸ್ಕೃತಿಕ ಘಟ್ಟಗಳಲ್ಲಿ ಮಾನವನು ಅನಾಗರಿಕತೆಯಿಂದ ನಾಗರಿಕತೆಯೆಡೆಗೆ ಬೆಳೆದು ಬರಲು ಸಮಕಾಲೀನ ನಂಬುಗೆ ಮತ್ತು ಸಂಪ್ರದಾಯಗಳು ಬಹು ಮುಖ್ಯ ಪಾತ್ರವಹಿಸಿವೆ. ಈ ನಂಬುಗೆ ಮತ್ತು ಸಂಪ್ರದಾಯಗಳೇ ಕಾಲಾಂತರದಲ್ಲಿ ಧಾರ್ಮಿಕ ಸ್ವರೂಪವನ್ನು ಪಡೆದವು. ಹೀಗಾಗಿ ಪ್ರಸ್ತುತ ಅಸ್ತಿತ್ವದಲ್ಲಿರುವ ಹಾಗೂ ಯಾವುದೋ ಒಂದು ಕಾಲಘಟ್ಟದಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿರುವ ವಿವಿಧ ಧರ್ಮ ಮತ್ತು ಪಂಥಗಳು ಇತಿಹಾಸಪೂರ್ವ ಕಾಲದಿಂದಲೂ ಮಾನವನ ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿವೆ. ಹಾಗೆಯೇ ಸಮಕಾಲೀನ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ ಸ್ಪಷ್ಟತೆಯನ್ನು ಒದಗಿಸಿವೆ. ಅಂತಹ ಅತೀ ಪ್ರಾಚೀನ ಶೈವ, ವೈಷ್ಣವ, ಬೌದ್ಧ, ಶಾಕ್ತ ಧರ್ಮಗಳಲ್ಲಿ ಜೈನ ಧರ್ಮವೂ ಒಂದು. ಈ ಧರ್ಮದ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ಪುನಾರಚಿಸುವಲ್ಲಿ ಕನ್ನಡ ನಾಡಿನ ಕೊಡುಗೆ ಅಪಾರ. ಕ್ರಿ. ಪೂ. ಸುಮಾರು ೪ನೆಯ ಶತಮಾನದ ಪೂರ್ವದಲ್ಲಿಯೇ ಈ ನಾಡಿನಲ್ಲಿ ಜೈನ ಧರ್ಮವನ್ನು ಪ್ರಸಾರಗೈದು ಸಮಾಜವನ್ನು ಜಾಗೃತಗೊಳಿಸಿದ ಕೀರ್ತಿ ಜೈನ ತೀರ್ಥಂಕರರು, ಮುನಿಗಳು, ಆರ್ಯಿಕೆಯರು, ಭಟ್ಟಾರಕರು ಮತ್ತು ಕವಿಗಳಿಗೆ ಸಲ್ಲುತ್ತದೆ. ಅವರ ಶ್ರಮದ ಫಲವಾಗಿಯೇ ಜೈನ ಧರ್ಮವು ಈ ನಾಡಿನ ಸಾಂಸ್ಕೃತಿಕ ಇತಿಹಾಸದೊಂದಿಗೆ ಹಾಸುಹೊಕ್ಕಾಗಿರುವುದು ಗಮನಾರ್ಹ. ಜೊತೆಗೆ ಇಲ್ಲಿಯ ಆಡಳಿತ, ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಹಿತ್ಯಿಕ, ಶಿಲ್ಪಕಲೆ, ವಾಸ್ತುಕಲೆ, ಚಿತ್ರಕಲೆ, ಜಾನಪದ ಮೊದಲಾದ ಕ್ಷೇತ್ರಗಳನ್ನೂ ಶ್ರೀಮಂತಗೊಳಿಸಿದೆ.

ಕನ್ನಡ ನಾಡಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಮತ್ತು ತಮ್ಮ ಆಳ್ವಿಕೆಯ ಪ್ರಭಾವವನ್ನು ಹೊಂದಿದ್ದ ಅರಸು, ಮಹಾಮಂಡಳೇಶ್ವರ, ಮಹಾಸಾಮಂತ, ಗಾವುಂಡ ಮೊದಲಾದ ಮನೆತನಗಳ ಅರಸರು, ರಾಣಿಯರು, ಆಡಳಿತಾಧಿಕಾರಿಗಳು ಮತ್ತು ಸಮಕಾಲೀನ ಶ್ರಾವಕರು, ಜೈನಾಭಿಮಾನಿಗಳು ಜೈನ ಧರ್ಮಕ್ಕೆ ಉದಾರವಾಗಿ ಆಶ್ರಯ-ಪ್ರೋತ್ಸಾಹ ಕೊಡಮಾಡಿದ್ದಾರೆ. ಅವರು ಬಸದಿಗಳನ್ನು ನಿರ್ಮಿಸಿರುವುದು, ಜೀರ್ಣೋದ್ಧಾರ ಗೊಳಿಸಿರುವುದು, ಶಿಲ್ಪಗಳನ್ನು ಪ್ರತಿಷ್ಠಾಪಿಸಿರುವುದು, ದಾನ-ದತ್ತಿಗಳನ್ನು ಕೊಡಮಾಡಿರುವುದು ಮೊದಲಾದವುಗಳು ನಾಡಿನಾದ್ಯಂತ ಹರಡಿಕೊಂಡಿರುವ ಸಮಕಾಲೀನ ಜೈನ ಪುರಾತತ್ವ ಅವಶೇಷಗಳಿಂದ ಮನದಟ್ಟಾಗುತ್ತದೆ. ಇವುಗಳಿಗೆ ಆಯಾ ಕಾಲದ ಸಾಹಿತ್ಯಕ ಆಕರಗಳೂ ಪೂರಕ ಮಾಹಿತಿ ಒದಗಿಸುತ್ತವೆ. ಹೀಗಾಗಿ ಈ ಎಲ್ಲ ಜೈನ ಪುರಾತತ್ವ ಅವಶೇಷಗಳು ಮತ್ತು ಸಾಹಿತ್ಯಕ ಆಕರಗಳ ಅನ್ವೇಷಣೆ, ಶೋಧನೆ, ಸಂಗ್ರಹಣೆ, ವಿಶ್ಲೇಷಣೆ ಮತ್ತು ಪ್ರಕಟಣೆ ಈ ನಾಡಿನ ನರನಾಡಿಗಳೆನಿಸಿರುವ ಗ್ರಾಮಗಳಿಂದ ಪ್ರಾರಂಭ ಮಾಡುವುದು ಅವಶ್ಯವೆನಿಸುತ್ತದೆ. ಈ ಬಗೆಯ ಅಧ್ಯಯನಗಳಿಂದ ಮಾತ್ರ ಈ ನಾಡಿನ ಜೈನ ಧರ್ಮದ ಸಾಂಸ್ಕೃತಿಕ ಇತಿಹಾಸದ ಬಹುಮುಖ ಚಿತ್ರವನ್ನು ವಸ್ತುನಿಷ್ಠವಾಗಿ ಪುನಾರಚಿಸಬಹುದು. ಅಲ್ಲದೇ ಈ ವರೆಗೂ ತಿಳಿದು ಬಂದಿರುವ ಜೈನ ಇತಿಹಾಸದಲ್ಲಿ ಕಳೆದುಹೋದ

ಕೊಂಡಿಗಳನ್ನು ಕಂಡುಕೊಳ್ಳಬಹುದು. ಈ ನಿಟ್ಟಿನಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನಲ್ಲಿರುವ ಜೈನ ಶಾಸನ, ಬಸದಿ, ಶಿಲ್ಪಗಳು ಈ ತಾಲೂಕಿನ ಜೈನ ಇತಿಹಾಸ, ಸಮಾಜ, ಸಂಸ್ಕೃತಿ, ವಾಸ್ತು ಮತ್ತು ಶಿಲ್ಪಕಲೆಗಳ ಅಧ್ಯಯನದಲ್ಲಿ ಹಲವು ಮಹತ್ವದ ನೂತನ ವಿಚಾರಗಳನ್ನು ತಿಳಿದುಕೊಳ್ಳಲು ಉಪಯುಕ್ತವಾಗಿವೆ. ಆದ್ದರಿಂದ ಈ ತಾಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಬಸದಿಗಳ ವಾಸ್ತು ಲಕ್ಷಣಗಳು, ಅವುಗಳಲ್ಲಿರುವ ಶಿಲ್ಪಗಳು ಮತ್ತು ಈ ತಾಲೂಕಿನ ಪ್ರಕಟಿತ, ಅಪ್ರಕಟಿತ ಜೈನ ಶಾಸನಗಳನ್ನೆಲ್ಲ ಒಂದೆಡೆಗೆ ಕಲೆಹಾಕಿ, ಅವುಗಳನ್ನು ವಿವಿಧ ದೃಷ್ಟಿಕೋನಗಳಿಂದ ಪರಿಶೀಲಿಸುವುದು ಪ್ರಸ್ತುತ ಸಂಶೋಧನ ಅಧ್ಯಯನದ ಆಶಯ.

ಕನ್ನಡ ನಾಡಿನಲ್ಲಿ ಕಳೆದ ಶತಮಾನದ ಉತ್ತರಾರ್ಧದಿಂದೀಚೆಗೆ ಜೈನ ಪುರಾತತ್ವ ಅವಶೇಷಗಳನ್ನು ಗಮನಿಸುವ ದೃಷ್ಟಿಕೋನ ಗಮನಾರ್ಹವಾದ ರೀತಿಯಲ್ಲಿ ಬದಲಾಗುತ್ತಿದೆ. ಹೀಗಾಗಿ ಜೈನ ಧರ್ಮದ ಮತ್ತು ಈ ನಾಡಿನ ಸಾಂಸ್ಕೃತಿಕ ಇತಿಹಾಸದ ಕುರಿತು ಹೊಸ ಹೊಸ ವಿಚಾರಗಳು ಬೆಳಕಿಗೆ ಬರುತ್ತಿವೆ. ಈ ನಿಟ್ಟಿನಲ್ಲಿ ಜೈನ ಧರ್ಮದ ಸ್ಮಾರಕಗಳನ್ನು ಕೇಂದ್ರವಾಗಿಟ್ಟುಕೊಂಡು ಅವುಗಳ ನಿರ್ಮಾಣದ ಪ್ರಾರಂಭ ಮತ್ತು ಬೆಳವಣಿಗೆಯನ್ನು ಈ ಧರ್ಮದ ಸೈದ್ಧಾಂತಿಕ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ (ಆಚಾರ-ವಿಚಾರಗಳು, ನಂಬುಗೆ-ಸಂಪ್ರದಾಯಗಳು) ಅಧ್ಯಯನಗಳನ್ನು ಮಾಡಲಾಗುತ್ತದೆ. ಜಿಲ್ಲೆ, ತಾಲ್ಲೂಕು, ಹೋಬಳಿ, ಗ್ರಾಮವನ್ನು ಕೇಂದ್ರವಾಗಿಟ್ಟುಕೊಂಡು ಅಲ್ಲಿರುವ ಜೈನ ಧರ್ಮದ ಬಸದಿ, ಶಿಲ್ಪ, ಶಾಸನಗಳನ್ನು ಆಯ್ದುಕೊಂಡು ಅವುಗಳ ಕುರಿತು ಸಮಗ್ರ ಅಧ್ಯಯನಗಳು ನಡೆಯುತ್ತಿವೆ. ಒಂದು ತಲವಿನ್ಯಾಸ ಅಥವಾ ಶೈಲಿಯ ಬಸದಿಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗುತ್ತಿದೆ. ಒಂದು ಅರಸು, ಮಹಾಮಂಡಳೇಶ್ವರ, ಮಹಾಸಾಮಂತ ಮನೆತನದ ಬಸದಿಗಳನ್ನು ಕೇಂದ್ರವಾಗಿಟ್ಟುಕೊಂಡು ಅವುಗಳ ವಾಸ್ತು ಲಕ್ಷಣಗಳನ್ನು ಗುರುತಿಸಲಾಗುತ್ತಿದೆ. ಒಂದು ಅರಸು ಮನೆತನದ ಜೈನ ಶಾಸನಗಳನ್ನು ಕೇಂದ್ರವಾಗಿಟ್ಟುಕೊಂಡು ಅವುಗಳಲ್ಲಿ ಉಲ್ಲೇಖಿತ ಬಸದಿಗಳನ್ನು ವಿವಿಧ ಮಗ್ಗಲುಗಳಿಂದ ಅಧ್ಯಯನ ಮಾಡಲಾಗುತ್ತಿದೆ. ಎರಡು ಪ್ರಾಚೀನ ಜೈನ ಕೇಂದ್ರಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿರುವ ಬಸದಿಗಳು, ಶಿಲ್ಪಗಳು, ಶಾಸನಗಳನ್ನು ತೌಲನಿಕವಾಗಿ ಗಮನಿಸಲಾಗುತ್ತಿದೆ. ಹೀಗೆ ಜೈನ ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂಧಿಸಿದಂತೆ ವಿವಿಧ ಅಧ್ಯಯನಗಳು ನಡೆದಿವೆ ಮತ್ತು ನಡೆಯುತ್ತಿವೆ. ಈ ಬಗೆಯಲ್ಲಿ ಸೀಮಿತ ಪ್ರದೇಶ ಅಥವಾ ವಿಷಯವನ್ನು ಆಯ್ದುಕೊಂಡು ಅಧ್ಯಯನ ಕೈಗೊಂಡರೆ ಆ ಪ್ರದೇಶ ಅಥವಾ ವಿಷಯಕ್ಕೆ ಸಂಬಂಧಿಸಿದಂತೆ ದೊರೆಯುವ ಬಹುತೇಕ ಕುರುಹುಗಳನ್ನು ಒಂದೆಡೆಗೆ ಕಲೆಹಾಕಿ ಅವುಗಳನ್ನು ಕೂಲಂಕಷವಾಗಿ ಮತ್ತು ವಸ್ತುನಿಷ್ಠವಾಗಿ ವಿಶ್ಲೇಷಣೆ ಮಾಡಲು ಹೆಚ್ಚು ಅವಕಾಶ ದೊರೆಯುತ್ತದೆ. ಆ ಹಿನ್ನೆಲೆಯಲ್ಲಿಯೇ ಪ್ರಸ್ತುತ ಗೋಕಾಕ ತಾಲೂಕನ್ನು ಕೇಂದ್ರವಾಗಿಟ್ಟುಕೊಂಡು "ಗೋಕಾಕ ತಾಲೂಕು ಮತ್ತು ಜೈನಧರ್ಮ" ಎಂಬ ಶೀರ್ಷಿಕೆಯಡಿಯಲ್ಲಿ ಈ ತಾಲೂಕಿನಲ್ಲಿರುವ ಜೈನ ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳ ವಿಶ್ಲೇಷಣಾತ್ಮಕ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ೨. ಭೌಗೋಳಿಕ ವೈಶಿಷ್ಟ್ಯತೆ

ಪ್ರತಿಯೊಂದು ಪ್ರದೇಶದ ಜನಜೀವನ ಮತ್ತು ಇತಿಹಾಸ ಅಲ್ಲಿನ ಭೌಗೋಳಿಕ ವೈಶಿಷ್ಟ್ಯತೆ ಮತ್ತು ನೈಸರ್ಗಿಕ ಸಂಪತ್ತಿನ ಹಿನ್ನೆಲೆಯಿಂದ ಪ್ರಭಾವಿತವಾಗಿರುತ್ತವೆ. ಮಾನವನು ಸ್ವಾಭಾವಿಕವಾಗಿ ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತಿದ್ದನು. ನೆಲದ ಗುಣ, ಖನಿಜ ಸಂಪತ್ತು, ನದಿ, ಪರ್ವತ, ಮರಳುಗಾಡು,


ಬೆಳಗಾವಿ ಜಿಲ್ಲೆಯ ನಕ್ಷೆ
ಸಾಂಗಲಿ ಜಿಲ್ಲೆ
ಅಥಣಿ
ಕೃಷ್ಣಾ ನದಿ
ರಾಯಬಾಗ
ಚಿಕ್ಕೋಡಿ
ಘಟಪ್ರಭಾ ನದಿ
ಗೋಕಾಕ
ಹುಕ್ಕೇರಿ
ರಾಮದುರ್ಗ
ಬೆಳಗಾಂವ
ಮಲಪ್ರಭಾ ನದಿ
ಸೌಂದತ್ತಿ
ಖಾನಾಪುರ
ಧಾರವಾಡ ಜಿಲ್ಲೆ
ಕಾರವಾರ ಜಿಲ್ಲೆ
ಬಾಗಲಕೋಟ ಜಿಲ್ಲೆ

ತೀರ ಪ್ರದೇಶ ಮೊದಲಾದ ಸಂಪನ್ಮೂಲಗಳು ಅಲ್ಲಿನ ನಿವಾಸಿಗಳ ಕಸುಬು, ಉಡುಗೆ, ತೊಡುಗೆ, ಧಾರ್ಮಿಕ ಸ್ವಭಾವ, ಆಚಾರ, ವಿಚಾರಗಳನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಹೀಗಾಗಿ ಭೌಗೋಳಿಕ ಸನ್ನಿವೇಶಗಳು ಇತಿಹಾಸದೊಂದಿಗೆ ಬಹು ನಿಕಟವಾದ ಸಂಬಂಧ ಹೊಂದಿರುವುದಂತೂ ಸ್ಪಷ್ಟ. ಗೋಕಾಕ ತಾಲೂಕಿನ ಭೌಗೋಳಿಕ ವೈಶಿಷ್ಟ್ಯತೆಗಳು (ಸಂಪನ್ಮೂಲ) ಇತಿಹಾಸ ಪೂರ್ವಯುಗದ ವಿವಿಧ ಶಿಲಾಯುಗ ಮಾನವನ ಸಂಸ್ಕೃತಿಗಳಿಗೆ ಆಶ್ರಯವೊಡ್ಡಿವೆ.ಇದನ್ನು ಈ ತಾಲೂಕಿನ ಕಲ್ಲೊಳೆ, ಕುಂದರಗಿ, ಕೊಣ್ಣೂರ, ಕೊಳವಿ, ಪಶ್ಚಾಪುರ, ಮಮದಾಪುರ, ಲೊಳಸುರ, ದ್ಯಾಗನಹಟ್ಟಿ ಗ್ರಾಮಗಳಲ್ಲಿ ಬೆಳಕಿಗೆ ಬಂದಿರುವ ಮಧ್ಯ ಹಳೆಯ ಶಿಲಾಯುಗ, ನೂತನ ಶಿಲಾಯುಗ, ಶಿಲಾ ತಾಮ್ರಯುಗ, ಬೃಹತ್ ಶಿಲಾಯುಗ ಸಂಸ್ಕೃತಿಗಳ ಮಾನವ ವಸತಿ ನೆಲೆಗಳು ಸ್ಪಷ್ಟಪಡಿಸುತ್ತವೆ.[1]ಈ ಭೌಗೋಳಿಕ ವೈಶಿಷ್ಟ್ಯತೆಗಳು ಇತಿಹಾಸ ಕಾಲದಲ್ಲಿ ಈ ತಾಲೂಕಿನ ಪ್ರದೇಶದಲ್ಲಿ ಆಳ್ವಿಕೆ ಕೈಗೊಂಡಿದ್ದ ವಿವಿಧ ಅರಸು ಮನೆತನಗಳ ರಾಜಕೀಯ, ಆರ್ಥಿಕ, ಸಾಮಾಜಿಕ ಸಾಂಸ್ಕೃತಿಕ ಕ್ಷೇತ್ರಗಳ ಅಭಿವೃದ್ಧಿಗೂ ಪೂರಕವಾಗಿವೆ. ಆ ದೃಷ್ಟಿಯಿಂದ ಪ್ರಸ್ತುತ ಪ್ರಬಂಧದಲ್ಲಿ ಗೋಕಾಕ ತಾಲೂಕಿನ ಭೌಗೋಳಿಕ ಪರಿಸರವನ್ನು ಸಂಕ್ಷಿಪ್ತವಾಗಿ ಗಮನಿಸಲಾಗಿದೆ.[2]

**೧. ಮೇರೆಗಳು**

ಗೋಕಾಕ ತಾಲೂಕಿನ ಭೂಪ್ರದೇಶವು ೧೫°೪೯' ಪೂರ್ವ ಅಕ್ಷಾಂಶದಿಂದ ೧೬°೨೧' ಪಶ್ಚಿಮ ಅಕ್ಷಾಂಶ, ೭೪°೩೭' ಉತ್ತರ ರೇಖಾಂಶದಿಂದ ೭೫°೧೬' ದಕ್ಷಿಣ ರೇಖಾಂಶಗಳ ಮಧ್ಯದಲ್ಲಿ ವಿಸ್ತರಿಸಿದೆ. ಗೋಕಾಕ ತಾಲೂಕಿನ ಮೇರೆಗಳಾಗಿ ಪೂರ್ವಕ್ಕೆ ರಾಮದುರ್ಗ ತಾಲೂಕು, ಪಶ್ಚಿಮಕ್ಕೆ ಹುಕ್ಕೇರಿ ತಾಲೂಕು, ಉತ್ತರಕ್ಕೆ ರಾಯಬಾಗ ತಾಲೂಕು, ದಕ್ಷಿಣಕ್ಕೆ ಸವದತ್ತಿ ತಾಲೂಕು, ನೈರುತ್ಯಕ್ಕೆ ಬೆಳಗಾವಿ ತಾಲೂಕು ಮತ್ತು ವಾಯವ್ಯಕ್ಕೆ ಮುಧೋಳ ತಾಲೂಕುಗಳು ವ್ಯಾಪಿಸಿವೆ.

**೨. ವಿಸ್ತೀರ್ಣ ಮತ್ತು ಜನಸಂಖ್ಯೆ**

೧೦೭ ಗ್ರಾಮಗಳನ್ನು ಹೊಂದಿರುವ ಗೋಕಾಕ ತಾಲೂಕು ಒಟ್ಟು ೧೫೪೯.೯ ಚದರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿದೆ. ಈ ತಾಲೂಕಿನ ಒಟ್ಟು ಜನಸಂಖ್ಯೆ ೧೯೯೧ರ ಜನಗಣತಿಯ ಪ್ರಕಾರ ೪,೪೧,೩೦೦ ಇರುವದು. ಜನ ಸಾಂದ್ರತೆಯು ಪ್ರತಿ ಚದರ ಕಿಲೋಮೀಟರ್‌ಗೆ ೨೮೭ ಇದೆ. ಆಡಳಿತದ ಅನುಕೂಲತೆಯ ದೃಷ್ಟಿಯಿಂದ ಗೋಕಾಕ ತಾಲೂಕನ್ನು ಮೂರು ಹೋಬಳಿಗಳನ್ನಾಗಿ (ಗೋಕಾಕ, ಕೌಜಲಗಿ, ಅರಭಾವಿ) ವಿಂಗಡಿಸಲಾಗಿದೆ.

**೩. ಹವಾಗುಣ ಮತ್ತು ಮಳೆ**

ಗೋಕಾಕ ತಾಲೂಕಿನ ಹವಾಗುಣ ಸಾಧಾರಣವಾಗಿ ಉತ್ತಮ ರೀತಿಯದು. ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ೪೦°C ರಷ್ಟು ಅಧಿಕ ಉಷ್ಣಾಂಶ, ಡಿಸೆಂಬರದಿಂದ ಫೆಬ್ರುವರಿಯವರೆಗೆ ತಾಲೂಕಿನಾದ್ಯಂತ ಚಳಿ ಇರುತ್ತದೆ. ಜೂನದಿಂದ ಸಪ್ಟೆಂಬರವರೆಗೆ ಈ ತಾಲೂಕಿನಲ್ಲಿ ಸರಾಸರಿ ೪೮೪.೩ ಮೀ. ಮೀ. ಮಳೆಯಾಗುತ್ತದೆ.

**೪. ಅರಣ್ಯ**

ಗೋಕಾಕ ತಾಲೂಕಿನ ಪಶ್ಚಿಮ ಭಾಗವು ಅಲ್ಲಲ್ಲಿ ಗುಡ್ಡ-ಬೆಟ್ಟಗಳು ಮತ್ತು ಕುರುಚಲು ಗಿಡಗಳಿಂದ ಆವೃತವಾಗಿದೆ. ಈ ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣದ ೨೨,೨೮೪ ಹೆಕ್ಟೇರು ಭೂಮಿ ಅರಣ್ಯ ಪ್ರದೇಶವನ್ನು ಹೊಂದಿದ್ದು. ಅವುಗಳಲ್ಲಿ ನೀಲಗಿರಿ, ಹುಣಸೆ, ಬೇವು, ಅರಳಿ ಮರಗಳು ಪ್ರಧಾನವಾಗಿವೆ.

## ಗೋಕಾಕ ತಾಲೂಕಿನ ನಕ್ಷೆ




Marketing through :
A. V. & COMPANY

*1983*

**೫. ಮಣ್ಣು**

ಗೋಕಾಕ ತಾಲೂಕಿನಲ್ಲಿ ಕಪ್ಪು, ಕೆಂಪು ಎರಿ, ಮಸಾರಿ ಮಣ್ಣುಗಳು ಹೆಚ್ಚಾಗಿ ಕಂಡುಬರುತ್ತವೆ. ಇವು ಕ್ರಮವಾಗಿ ಹತ್ತಿ, ಜೋಳ, ಗೋಧಿ, ತಂಬಾಕು, ಕಬ್ಬು, ಶೇಂಗಾ, ಮೆಕ್ಕೆಜೋಳ, ದ್ವಿದಳ ಧಾನ್ಯಗಳು ಮುಂತಾದ ವಾಣಿಜ್ಯ ಮತ್ತು ಆಹಾರ ಬೆಳೆಗಳನ್ನು ಬೆಳೆಯಲು ಹೆಚ್ಚು ಉಪಯುಕ್ತವಾಗಿವೆ.

**೬. ವ್ಯವಸಾಯ**

ಗೋಕಾಕ ತಾಲೂಕು ಒಟ್ಟು ೧೫,೪೩೦೮ ಹೆಕ್ಟೇರುಗಳಷ್ಟು ಭೌಗೋಳಿಕ ವಿಸ್ತಿರ್ಣವನ್ನು ಹೊಂದಿದೆ. ಇದರಲ್ಲಿ ೨೨,೮೮೨ ಹೆಕ್ಟೇರು ಭೂಮಿ ಸಾಗುವಳಿಗೆ ಒಳಪಟ್ಟಿದೆ. ಸುಮಾರು ೭೫%ರಷ್ಟು ಭೂ ಕ್ಷೇತ್ರವು ನೀರಾವರಿಗೆ ಒಳಪಟ್ಟಿದೆ. ವ್ಯವಸಾಯವು ಈ ತಾಲೂಕಿನ ಜನರ ಮುಖ್ಯ ಉದ್ಯೋಗವಾಗಿದೆ.

**೭. ಬೆಳೆ**

ಗೋಕಾಕ ತಾಲೂಕಿನಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಸಾಗುವಳಿ ಭೂಮಿ ಇರುವುದರಿಂದ ಇಲ್ಲಿ ವಿವಿಧ ಆಹಾರ ಧಾನ್ಯ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಅನುಕೂಲವಾಗಿದೆ. ಈ ತಾಲೂಕಿನಲ್ಲಿ ಗೋಧಿ, ನೆಲಗಡಲೆ, ಕಡಲೆ, ಹತ್ತಿ, ಕಬ್ಬು, ಮೆಕ್ಕೆಜೋಳ, ಭತ್ತ ಇತ್ಯಾದಿ ಬೆಳೆಗಳನ್ನು ಮುಖ್ಯವಾಗಿ ಬೆಳೆಯಲಾಗುತ್ತದೆ. ಗೋಧಿ ೮೮೦೮ ಹೆಕ್ಟೇರು ಪ್ರದೇಶದಲ್ಲಿ, ಮೆಕ್ಕೆಜೋಳ ೨೭,೮೩೬ ಹೆಕ್ಟೇರು ಪ್ರದೇಶದಲ್ಲಿ, ಕಡಲೆ ೨,೫೯ ಹೆಕ್ಟೇರು ಪ್ರದೇಶದಲ್ಲಿ, ನೆಲಗಡಲೆ ೬,೩೭೭ ಹೆಕ್ಟೇರು ಪ್ರದೇಶದಲ್ಲಿ, ಕಬ್ಬು ೧೭,೬೫೯ ಹೆಕ್ಟೇರು ಪ್ರದೇಶದಲ್ಲಿ, ಹತ್ತಿ ೮,೧೨೭ ಹೆಕ್ಟೇರು ಪ್ರದೇಶದಲ್ಲಿ ಬೆಳೆಯಲಾಗುತ್ತದೆ.

**೮. ಜಲಸಂಪನ್ಮೂಲ**

ಗೋಕಾಕ ತಾಲೂಕಿನಲ್ಲಿ ಘಟಪ್ರಭಾ ಮತ್ತು ಮಾರ್ಕಂಡೇಯ ನದಿಗಳು ಹರಿದಿವೆ. ಘಟಪ್ರಭಾ ನದಿಗೆ ಹುಕ್ಕೇರಿ ತಾಲೂಕಿನ ಹಿಡಕಲ್ಲದಲ್ಲಿ ಆಣೆಕಟ್ಟನ್ನು ನಿರ್ಮಿಸಿ ಕಾಲುವೆಯ ಮುಖಾಂತರ ಗೋಕಾಕ ತಾಲೂಕಿನಲ್ಲಿ ನೀರಾವರಿ ವ್ಯವಸ್ಥೆಯನ್ನು ಕೈಗೊಳ್ಳಲಾಗಿದೆ. ಇದೇ ನದಿಯ ಮುಖಾಂತರ ಗೋಕಾಕ ಜಲಪಾತದ ಹತ್ತಿರ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲಾಗಿದೆ. ಈ ವಿದ್ಯುತ್ತನ್ನು ಸ್ಥಳೀಯ ಬಟ್ಟೆ (ಜವಳಿ) ಗಿರಣಿಗೆ ಉಪಯೋಗಿಸಲಾಗುತ್ತಿದೆ. ಈ ತಾಲೂಕಿನ ಒಟ್ಟು ೨೪,೫೨೮ ಹೆಕ್ಟೇರು ನಿವ್ವಳ ಪ್ರದೇಶವು ಕಾಲುವೆಗಳ ಮುಖಾಂತರ ನೀರಾವರಿಗೆ ಒಳಪಟ್ಟಿದೆ.

**೯. ಪ್ರಾಣಿ**

ಗೋಕಾಕ ತಾಲೂಕಿನಲ್ಲಿ ನರಿ, ನವಿಲು, ತೋಳ, ಮೊಲ, ಕಾಡುಬೆಕ್ಕುಗಳು ವಿಶೇಷವಾಗಿ ಗೋಚರಿಸುತ್ತವೆ. ಎತ್ತು, ಎಮ್ಮೆ, ಆಕಳು, ಕುರಿ ಮುಂತಾದ ಸಾಕು ಪ್ರಾಣಿಗಳಿವೆ. ಅನೇಕ ಬಗೆಯ ಕಾಡು ಹಕ್ಕಿಗಳು, ಗಿಳಿ, ಗೂಬೆ, ಕೋಗಿಲೆ ಮುಂತಾದ ಪಕ್ಷಿಗಳು ಕಂಡುಬರುತ್ತವೆ.

**೧೦. ಸಂಪರ್ಕ ವ್ಯವಸ್ಥೆ**

ಹುಬ್ಬಳ್ಳಿ-ಅಥಣಿ ರಾಜ್ಯ ಮುಖ್ಯ ರಸ್ತೆಯು ಗೋಕಾಕ ಮುಖಾಂತರ ಸಾಗುತ್ತದೆ. ಗೋಕಾಕ ತಾಲೂಕಿನ ಕೆಲವು ಭಾಗಗಳಲ್ಲಿ ರೈಲು ಸಂಪರ್ಕ ಇದೆ. ಗೋಕಾಕ ರೋಡ, ಘಟಪ್ರಭಾ, ಕೊಣ್ಣೂರ ಇವು ರೈಲು ಸಂಪರ್ಕದ ಗ್ರಾಮಗಳು.

## ೩. ಪೂರ್ವಾಧ್ಯಯನಗಳ ಸಮೀಕ್ಷೆ

ಈ ವರೆಗೆ ಹಲವು ವಿದ್ವಾಂಸರು ಮತ್ತು ಸಂಶೋಧಕರು ತಮ್ಮ ಅಧ್ಯಯನದ ಪರಿಮಿತಿಯಲ್ಲಿ ಗೋಕಾಕ ತಾಲೂಕಿನ ಕೆಲವು ಮಹತ್ವದ ಜೈನ ಶಾಸನ, ಬಸದಿ, ಶಿಲ್ಪ, ಸ್ಮಾರಕಗಲ್ಲು ಮತ್ತು ಕೆಲವು ಜೈನ ಕೇಂದ್ರಗಳ ಐತಿಹ್ಯ ಮೊದಲಾದವುಗಳನ್ನು ಪೂರಕವಾಗಿಟ್ಟುಕೊಂಡು ಹಲವು ಹೊಸ ವಿಷಯಗಳನ್ನು ಹೊರಗೆಡವಿದ್ದಾರೆ. ಆ ಅಧ್ಯಯನಗಳು ಈ ಕೆಳಗಿನಂತಿವೆ.

### ೨.೧. ಗೆಜೆಟಿಯರ್, ವಾರ್ಷಿಕ ವರದಿ ಮತ್ತು ಶಾಸನ ಸಂಪುಟಗಳು

ಶ್ರೀ ವೆಂಕಟರಂಗೊ ಕಟ್ಟಿ ಅವರು ಸಂಪಾದಿಸಿರುವ "ಧಾರವಾಡ, ಬೆಳಗಾವಿ, ಬಿಜಾಪುರ, ಕಾನಡಾ ಜಿಲ್ಲೆಗಳ ಗೆಜೆಟಿಯರ್"ದಲ್ಲಿ ಗೋಕಾಕ ತಾಲೂಕಿನ ಭೌಗೋಳಿಕ, ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯ ಕುರಿತಾಗಿ ಸಂಕ್ಷಿಪ್ತವಾದ ವಿವರಣೆಗಳಿವೆ.[3] ಡಾ. ಸೂರ್ಯನಾಥ ಕಾಮತ್ ಅವರು ಸಂಪಾದಿಸಿರುವ "ಬೆಳಗಾವಿ ಜಿಲ್ಲೆಯ ಗೆಜೆಟಿಯರ್" ವು ಗೋಕಾಕ ತಾಲೂಕಿನ ರಾಜಕೀಯ, ಆರ್ಥಿಕ, ಸಾಮಾಜಿಕ ವಿವರಗಳು ಮತ್ತು ಕೆಲವು ಐತಿಹಾಸಿಕ ಗ್ರಾಮಗಳ ಸಂಕ್ಷಿಪ್ತವಾದ ವಿವರಣೆಯನ್ನು ಒಳಗೊಂಡಿದೆ.[4] ಶ್ರೀ ಜೇಮ್ಸ್ ಎಂ. ಕ್ಯಾಂಬೆಲ್ ಅವರು ಸಂಪಾದಿಸಿರುವ "ಗೆಜೆಟಿಯರ್ ಆಫ್ ಬೆಳಗಾಂ" ವು ಗೋಕಾಕ ತಾಲೂಕಿನ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ವಿವರಣೆಯನ್ನು ಒಳಗೊಂಡಿದೆ.[5] ಬಾಂಬೆ ರಾಯಲ್ ಏಶಿಯಾಟಿಕ್ ಸೊಸೈಟಿಯ "ಜರ್ನಲ್ ಆಫ್ ಬಾಂಬೆ ಬ್ರ್ಯಾಂಚ್ ರಾಯಲ್ ಏಶಿಯಾಟಿಕ್ ಸೊಸೈಟಿ ಆಫ್ ಬಾಂಬೆ" ನಿಯತಕಾಲಿಕೆಯಲ್ಲಿ ಕೊಣ್ಣೂರಿನ ಜೈನ ಶಾಸನದ ಪಾಠ ಮತ್ತು ಸಾರಾಂಶವಿದೆ.[6] ಮೈಸೂರಿನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ "ಎನ್ಯುವಲ್ ರಿಪೋರ್ಟ್ಸ್ ಆನ್ ಸೌತ್ ಇಂಡಿಯನ್ ಎಪಿಗ್ರಫಿ : ೧೯೫೨-೫೩" ವಾರ್ಷಿಕ ವರದಿಯಲ್ಲಿ ಕೊಣ್ಣೂರದ ಜೈನ ಶಾಸನದ ಸಂಕ್ಷಿಪ್ತ ಸಾರಾಂಶವಿದೆ.[7] ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ "ಎಪಿಗ್ರಫಿಯಾ ಇಂಡಿಕ ಸಂಪುಟ-೨೧" ಶಾಸನ ಸಂಪುಟದಲ್ಲಿ ಗೋಕಾಕದ ಜೈನ ತಾಮ್ರಪಟ ಶಾಸನದ ಪಾಠ ಮತ್ತು ಸಾರಾಂಶವಿದೆ.[8]

### ೨.೨. ಕೃತಿಗಳು

ಡಾ. ಪಿ. ಬಿ. ದೇಸಾಯಿ ಅವರು ತಮ್ಮ "ಜೈನಿಸಂ ಇನ್ ಸೌತ್ ಇಂಡಿಯಾ ಆ್ಯಂಡ್ ಸಮ್ ಜೈನ್ ಎಪಿಗ್ರಾಫ್ಸ್" ಕೃತಿಯಲ್ಲಿ ಗೋಕಾಕದ ಜೈನ ತಾಮ್ರಪಟ ಶಾಸನ ಮತ್ತು ಕಲ್ಲೊಳೆಯ ಜೈನ ಶಾಸನವನ್ನು ಸಾಂದರ್ಭಿಕವಾಗಿ ಉಲ್ಲೇಖಿಸಿದ್ದಾರೆ.[9] ಶ್ರೀ ಮನೋಜ ಪಾಟೀಲ ಅವರು ತಮ್ಮ "ಬೆಳಗಾವಿ ಜಿಲ್ಲಾ ಮಾರ್ಗದರ್ಶಿ" ಕೃತಿಯಲ್ಲಿ ಗೋಕಾಕ ತಾಲೂಕಿನ ಸಾಂಸ್ಕೃತಿಕ ಇತಿಹಾಸವನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ.[10] ಡಾ. ಪಿ. ಜಿ. ಕೆಂಪಣ್ಣವರ ಮತ್ತು ಡಾ. ಟಿ. ಆರ್. ಜೋಡಟ್ಟಿ ಅವರು ಸಂಪಾದಿಸಿರುವ "ಜೈನ ಕ್ಷೇತ್ರಗಳ ಐತಿಹ್ಯ" ಕೃತಿಯಲ್ಲಿ ಗೋಕಾಕ ತಾಲೂಕಿನ ಜೈನ ಕೇಂದ್ರ ಕೊಣ್ಣೂರ ಗ್ರಾಮದ ಐತಿಹ್ಯವಿದೆ.[11]

### ೨.೩. ಲೇಖನಗಳು

ಡಾ. ಆರ್. ಎನ್. ಗುರವ ಅವರು "ಪಾರ್ಶ್ವಪಂಡಿತನ ಕಲ್ಲೊಳೆಯ ಶಾಸನ" ಸಂಶೋಧನ ಲೇಖನದಲ್ಲಿ ಕಲ್ಲೊಳೆಯ ಜೈನ ಶಾಸನದ ಪಾಠ, ಸಾರಾಂಶ ಮತ್ತು ಮಹತ್ವವನ್ನು ಚರ್ಚಿಸಿದ್ದಾರೆ.[12] ಶ್ರೀ ಚಂದ್ರಶೇಖರ ತಬೋಜಿ ಅವರು "ಕೊಣ್ಣೂರಿನ ಒಂದು ಜಿನಬಿಂಬ ಶಾಸನ" ಮತ್ತು "ಗೋಕಾಕದ ಜಿನಬಿಂಬ ಶಾಸನ"

ಲೇಖನಗಳಲ್ಲಿ ಕೊಣ್ಣೂರ ಮತ್ತು ಗೋಕಾಕದ ಜೈನ ಪಾದಪೀಠ ಶಾಸನಗಳ ಪಾಠ ಮತ್ತು ಮಹತ್ವವನ್ನು ಚರ್ಚಿಸಿದ್ದಾರೆ.[13] ಡಾ. ಅಪ್ಪಣ್ಣ ಎನ್. ಹಂಜೆ ಅವರು "ಬೆಳಗಾವಿ ಜಿಲ್ಲೆಯ ಬಸದಿಗಳು ಮತ್ತು ಶಿಲ್ಪಗಳು" ಮತ್ತು "ಗೋಕಾಕ ತಾಲೂಕಿನ ಶಾಸನಗಳು" ಲೇಖನಗಳಲ್ಲಿ ಗೋಕಾಕ ತಾಲೂಕಿನ ಜೈನ ಬಸದಿಗಳು, ಶಿಲ್ಪಗಳು ಮತ್ತು ಶಾಸನಗಳ ಕುರಿತು ಚರ್ಚಿಸಿದ್ದಾರೆ.[14]

### ೨.೪. ಸಂಶೋಧನ ಪ್ರಬಂಧಗಳು

ಡಾ. ಶಿ. ಬಾ. ಪಾಟೀಲ ಅವರು ತಮ್ಮ "ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ" ಪಿಎಚ್.ಡಿ. ಮಹಾಪ್ರಬಂಧದಲ್ಲಿ ಸಾಂದರ್ಭಿಕವಾಗಿ ಗೋಕಾಕ ತಾಲೂಕಿನಲ್ಲಿರುವ ಸವದತ್ತಿ ರಟ್ಟರ ಕಾಲದ ಕೆಲವು ಜೈನ ಬಸದಿಗಳು ಮತ್ತು ಶಾಸನಗಳನ್ನು ಪ್ರಸ್ತಾಪಿಸಿದ್ದಾರೆ.[15] ಡಾ. ಬಿ. ಆರ್. ಹಂದೂರ ಅವರು ತಮ್ಮ "ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ" ಪಿಎಚ್.ಡಿ. ಮಹಾಪ್ರಬಂಧದಲ್ಲಿ ಗೋಕಾಕ ತಾಲೂಕಿನ ಕೆಲವು ಜೈನ ಕೇಂದ್ರಗಳನ್ನು ಸಂಕ್ಷಿಪ್ತವಾಗಿ ಗಮನಿಸಿದ್ದಾರೆ.[16] ಡಾ. ಎಸ್. ಜಿ. ಚಲವಾದಿ ಅವರು ತಮ್ಮ "ಬೆಳಗಾವಿ ಜಿಲ್ಲೆಯ ಜೈನ ವಾಸ್ತು ಶಿಲ್ಪಕಲೆ" ಪಿಎಚ್.ಡಿ. ಮಹಾಪ್ರಬಂಧದಲ್ಲಿ ಗೋಕಾಕ ತಾಲೂಕಿನ ಕೊಣ್ಣೂರ ಮತ್ತು ಕಲ್ಲೊಳೆಯ ಬಸದಿಗಳನ್ನು ಪರಿಚಯಿಸಿದ್ದಾರೆ.[17] ಡಾ. ರಾಜಶೇಖರ ಇಚ್ಚಂಗಿ ಅವರು ತಮ್ಮ "ಪಾರ್ಶ್ವನಾಥ ಪುರಾಣ : ಒಂದು ತೌಲನಿಕ ಅಧ್ಯಯನ" ಪಿಎಚ್.ಡಿ. ಮಹಾಪ್ರಬಂಧದಲ್ಲಿ ಗೋಕಾಕ ತಾಲೂಕಿನ ಕಲ್ಲೊಳೆಯ ಜೈನ ಶಾಸನವನ್ನು ರಚಿಸಿರುವ ಪಾರ್ಶ್ವಪಂಡಿತ ಕವಿಯನ್ನು ಪರಿಚಯಿಸಿದ್ದಾರೆ.[18]

## ೪. ಅಧ್ಯಯನದ ಉದ್ದೇಶ

ಈ ವರೆಗೆ ಗೋಕಾಕ ತಾಲೂಕಿಗೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳಲ್ಲಿ ಮತ್ತು ಪ್ರಕಟವಾಗಿರುವ ಕೃತಿ, ಲೇಖನಾದಿಗಳಲ್ಲಿ ಗೋಕಾಕ ತಾಲೂಕಿನಲ್ಲಿ ಜೈನ ಧರ್ಮದ ಅಧ್ಯಯನವು ಒಂದು ಭಾಗವಾಗಿ ಸಾಂದರ್ಭಿಕ ಉಲ್ಲೇಖಗಳಿಗೆ ಮಾತ್ರ ಸೀಮಿತವಾಗಿ ಕಾಣುತ್ತದೆ. ಹೀಗಾಗಿ ಗೋಕಾಕ ತಾಲೂಕಿನ ಎಲ್ಲ ಗ್ರಾಮಗಳನ್ನು ಕ್ಷೇತ್ರಕಾರ್ಯ ಮೂಲಕ ಅಧ್ಯಯನಕ್ಕೆ ಒಳಪಡಿಸುವುದು ಸಾಧ್ಯವಿದೆ ಎನಿಸಿತು. ಆ ಮೂಲಕ ಸೀಮಿತ ಪ್ರದೇಶದಲ್ಲಿ ಜೈನ ಪುರಾತತ್ವೀಯ ಒಳಹೊರಗುಗಳ ವಿಸ್ತೃತ ಅಧ್ಯಯನಕ್ಕೆ ಅವಕಾಶವಾಗುವುದೆಂದು ಸ್ಪಷ್ಟವಾಯಿತು. ಆದುದರಿಂದ ಪ್ರಸ್ತುತ ಪ್ರಬಂಧದ ಮುಖ್ಯ ಉದ್ದೇಶ ಗೋಕಾಕ ತಾಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಜೈನ ಶಾಸನ, ಬಸದಿ ಮತ್ತು ಶಿಲ್ಪಗಳನ್ನು ಅಧ್ಯಯನ ಮಾಡುವುದಾಗಿದೆ. ಆ ಮೂಲಕ ಪ್ರಸ್ತುತ ಪ್ರಬಂಧದಲ್ಲಿ ಈ ತಾಲೂಕಿನ ಬಸದಿ ಮತ್ತು ಶಿಲ್ಪ ವಿವರ ಮತ್ತು ಜೈನ ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಮುಂದಿಡಲಾಗಿದೆ. ಜೈನ ಶಾಸನ, ಬಸದಿ ಮತ್ತು ಶಿಲ್ಪಗಳಿಗೆ ಸಂಬಂಧಿಸಿದ ಈ ವರೆಗಿನ ಅಧ್ಯಯನಗಳು ಕೆಲವು ಅಂಶಗಳಿಗೆ ಮಾತ್ರ ಮಹತ್ವಕೊಟ್ಟಿವೆ. ಆ ಎಲ್ಲ ಕೊರತೆಗಳನ್ನು ನೀಗಿಸುವ ಪ್ರಯತ್ನವನ್ನೂ ಈ ಪ್ರಬಂಧದಲ್ಲಿ ಮಾಡಲಾಗಿದೆ.

## ೫. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಸಂಶೋಧನ ಅಧ್ಯಯನದ ವ್ಯಾಪ್ತಿಯನ್ನು ಕ್ರಿಸ್ತಪೂರ್ವದಿಂದ ೧೯ನೆಯ ಶತಮಾನದವರೆಗೆ ಎಂದಿಟ್ಟುಕೊಳ್ಳಲಾಗಿದೆ. ಪ್ರಧಾನವಾಗಿ ಗೋಕಾಕ ತಾಲೂಕಿನ ೧೧೭ ಗ್ರಾಮಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ವಿಜಯನಗರೋತ್ತರ ಕಾಲದವರೆಗಿನ ಜೈನ ಶಾಸನ, ಬಸದಿ ಮತ್ತು ಶಿಲ್ಪಗಳನ್ನು ಸಂಗ್ರಹಿಸಿ, ಶಾಸನಗಳ ಹಿನ್ನೆಲೆಯಲ್ಲಿ

ಜೈನ ಧರ್ಮಕ್ಕೆ ಆಶ್ರಯ-ಪ್ರೋತ್ಸಾಹ ನೀಡಿದ ಅರಸು ಮನೆತನಗಳ ಇತಿಹಾಸವನ್ನು ಗಮನಿಸಲಾಗಿದೆ. ಬಸದಿಗಳ ವಿಶೇಷ ವಾಸ್ತು ಲಕ್ಷಣ, ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಗುರುತಿಸಲಾಗಿದೆ. ಕೆಲವು ಸಂದರ್ಭಗಳಲ್ಲಿ ವಿಷಯದ ವಿಶ್ಲೇಷಣೆಯ ದೃಷ್ಟಿಯಿಂದ ಈ ತಾಲೂಕಿಗೆ ಸಂಬಂಧಿಸಿದಂತೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಾಯವಾಗುವ ಇತರೆಡೆಯ ಜೈನ ಪುರಾತತ್ವ ಮತ್ತು ಸಾಹಿತ್ಯಿಕ ಆಕರಗಳನ್ನೂ ಪೂರಕವಾಗಿಟ್ಟುಕೊಂಡು ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲಾಗಿದೆ.

## ೬. ಅಧ್ಯಯನದ ವಿಧಾನ

ಗೋಕಾಕ ತಾಲೂಕಿನಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳುವ ಪೂರ್ವದಲ್ಲಿ ಮತ್ತು ಕ್ಷೇತ್ರಕಾರ್ಯವನ್ನು ಕೈಗೊಂಡು ಸಂಗ್ರಹಿಸಿದ ಅವಶೇಷಗಳ ವಿಷಯ ನಿರೂಪಣೆಯಲ್ಲಿ ಈ ಮುಂದಿನ ಕೆಲವು ವಿಧಾನಗಳನ್ನು ಅನುಸರಿಸಲಾಗಿದೆ. ಪ್ರಾರಂಭದಲ್ಲಿ ಗೋಕಾಕ ತಾಲೂಕಿನ ಇತಿಹಾಸ, ಧರ್ಮ, ಸಂಸ್ಕೃತಿ, ಶಾಸನ, ಬಸದಿ, ಶಿಲ್ಪಗಳು ಮೊದಲಾದವುಗಳ ಕುರಿತು ಈಗಾಗಲೇ ಪ್ರಕಟವಾಗಿರುವ ಕೃತಿ, ಲೇಖನ ಮತ್ತು ಪ್ರಬಂಧಗಳನ್ನು ಪರಿಶೀಲಿಸಲಾಗಿದೆ. ಅದರೊಟ್ಟಿಗೆ ಅಕಾರಾದಿಯಲ್ಲಿ ಆಕರ ಗ್ರಂಥಗಳ ಪಟ್ಟಿಯನ್ನು ತಯಾರಿಸಿಕೊಳ್ಳಲಾಗಿದೆ. ತರುವಾಯ ಈ ತಾಲೂಕಿನ ೧೦೭ ಗ್ರಾಮಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಜೈನ ಶಾಸನ, ಬಸದಿ ಮತ್ತು ಶಿಲ್ಪಗಳ ವಿವರಪೂರ್ಣವಾದ ದಾಖಲಾತಿ ಮಾಡಿಕೊಳ್ಳಲಾಗಿದೆ. ಜೊತೆಗೆ ಬಸದಿಗಳು, ಶಿಲ್ಪಗಳ ರೇಖಾಚಿತ್ರ ಮತ್ತು ಛಾಯಾಚಿತ್ರಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಆ ಸಂದರ್ಭದಲ್ಲಿ ಗಮನಿಸುವ ಅಪ್ರಕಟಿತ ಜೈನ ಶಾಸನಗಳ ಪಡಿಯಚ್ಚು ಸಂಗ್ರಹಿಸಿ ಅವುಗಳನ್ನು ಓದಿ ಅವು ಒದಗಿಸುವ ಮಾಹಿತಿಯನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ಆಯಾ ವಿಷಯಗಳನ್ನು ಪ್ರತ್ಯೇಕವಾದ ಪಟ್ಟಿಗಳಲ್ಲಿ ದಾಖಲಿಸಿಕೊಂಡು ಸಂದರ್ಭಾನುಸಾರವಾಗಿ ಬಳಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯ ಮೂಲಕ ಬಸದಿಗಳ ರಚನೆಯನ್ನು ಅಧ್ಯಯನ ಮಾಡುವುದರೊಂದಿಗೆ ಅವುಗಳ ವಿನ್ಯಾಸ ಮತ್ತು ಶೈಲಿಗಳನ್ನು ಗುರುತಿಸಿ ಅವುಗಳ ವಾಸ್ತು ಲಕ್ಷಣಗಳನ್ನು ಕಂಡುಕೊಳ್ಳಲಾಗಿದೆ. ಅವುಗಳ ವಾಸ್ತು ಲಕ್ಷಣಗಳನ್ನು ಚರ್ಚಿಸುವಾಗ ಮೊದಲು ತಿರ್ಯಙ್ಮುಖ ವಾಸ್ತು ರಚನೆಯನ್ನು ಅಂದರೆ ಗರ್ಭಗೃಹದಿಂದ ಮುಖಮಂಟಪದವರೆಗಿನ ಒಳಭಾಗವನ್ನು ನಂತರ ಊರ್ಧ್ವಮುಖ ವಾಸ್ತು ರಚನೆಯನ್ನು ಅಂದರೆ ಅಧಿಷ್ಠಾನದಿಂದ ಕಳಶದವರೆಗಿನ ಹೊರಭಾಗವನ್ನು ಪರಿಶೀಲಿಸಿ, ಅವುಗಳಲ್ಲಿರುವ ವಿವಿಧ ಉಪಾಂಗಗಳ ವಾಸ್ತು ಲಕ್ಷಣಗಳನ್ನೂ ಪರಿಶೀಲಿಸಲಾಗಿದೆ. ಬಸದಿಗಳಲ್ಲಿ ಮತ್ತು ಅವುಗಳ ಪರಿಸರದಲ್ಲಿ ಕಂಡುಬಂದ ಶಿಲ್ಪಗಳನ್ನು ಮಾಧ್ಯಮ, ಶೈಲಿ, ಕಾಲಮಾನ ಮತ್ತು ಪ್ರತಿಮಾ ಲಕ್ಷಣಗಳ ಹಿನ್ನೆಲೆಯಲ್ಲಿ ಗಮನಿಸಿ ವಿಶ್ಲೇಷಿಸಲಾಗಿದೆ. ಹೀಗೆ ಪ್ರಸ್ತುತ ಪ್ರಬಂಧಕ್ಕೆ ಮೂಲ ಮತ್ತು ಪೂರಕ ಆಕರಗಳಾಗಿರುವ ಜೈನ ಶಾಸನ, ಬಸದಿ, ಶಿಲ್ಪಗಳು ಒದಗಿಸುವ ವಿವರಗಳನ್ನೆಲ್ಲ ಪ್ರತ್ಯೇಕವಾದ ಪಟ್ಟಿಗಳಲ್ಲಿ ಸಂಗ್ರಹಿಸಿಕೊಳ್ಳಲಾಗಿದೆ. ಇವುಗಳನ್ನು ವಿಷಯಕ್ಕನುಗುಣವಾಗಿ ಹೊಂದಿಸಿಕೊಂಡು, ವ್ಯವಸ್ಥಿತವಾದ ರೀತಿಯಲ್ಲಿ ವಿನ್ಯಾಸಗೊಳಿಸಿ ನಿರೂಪಿಸಲಾಗಿದೆ.

## ೭. ಅಧ್ಯಯನದ ಸ್ವರೂಪ

ಈ ಮೇಲೆ ಅಧ್ಯಯನದ ವಿಧಾನದಲ್ಲಿ ಗಮನಿಸಿದಂತೆ ಹಲವು ವಿಧಾನಗಳನ್ನು ಅನುಸರಿಸಿ ಪ್ರತ್ಯೇಕಿಸಲಾದ ವಸ್ತು-ವಿಷಯಗಳನ್ನು ವ್ಯವಸ್ಥಿತವಾದ ವಿಶ್ಲೇಷಣೆ ಮತ್ತು ನಿರೂಪಣೆಯ ದೃಷ್ಟಿಯಿಂದ ಪ್ರಸ್ತುತ ಸಂಶೋಧನ ಪ್ರಬಂಧವನ್ನು ಒಟ್ಟು ಆರು ಅಧ್ಯಾಯಗಳಲ್ಲಿ ವಿಂಗಡಿಸಲಾಗಿದೆ.

'ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ' ಎಂಬ ೧ನೆಯ ಅಧ್ಯಾಯದಲ್ಲಿ ಕನ್ನಡ ನಾಡಿನಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಪ್ರಾಸ್ತಾವಿಕ ವಿಚಾರಗಳೊಂದಿಗೆ ಜೈನ ಶಾಸನ, ಬಸದಿ ಮತ್ತು ಶಿಲ್ಪಗಳ ಮಹತ್ವ, ಪ್ರಬಂಧದ ವಿಷಯ, ಅಧ್ಯಯನದ ಅವಶ್ಯಕತೆ, ಉದ್ದೇಶ, ವ್ಯಾಪ್ತಿ, ವಿಧಾನ, ಪೂರ್ವಾಧ್ಯಯನಗಳ ಸಮೀಕ್ಷೆ, ಭೌಗೋಳಿಕ ಹಿನ್ನೆಲೆ ಹಾಗೂ ಪ್ರಬಂಧದ ಸ್ವರೂಪವನ್ನು ವಿಷದಪಡಿಸಲಾಗಿದೆ.

'ಜೈನಧರ್ಮ ಮತ್ತು ರಾಜಾಶ್ರಯ' ಎಂಬ ೨ನೆಯ ಅಧ್ಯಾಯದಲ್ಲಿ ಜೈನ ಧರ್ಮದ ಉಗಮ, ತೀರ್ಥಂಕರರು, ತತ್ವ-ಸಿದ್ಧಾಂತಗಳು, ಕನ್ನಡ ನಾಡಿನಲ್ಲಿ ಜೈನ ಧರ್ಮದ ಪ್ರಾಚೀನತೆ, ಪ್ರಸಾರ, ರಾಜಾಶ್ರಯ, ಇಳಿಮುಖ, ವಿವಿಧ ಪಂಗಡಗಳು, ಇತರ ಧರ್ಮಗಳೊಂದಿಗೆ ಹೊಂದಾಣಿಕೆ ಇತ್ಯಾದಿ ಸಂಗತಿಗಳನ್ನು ಚರ್ಚಿಸಲಾಗಿದೆ. ಇದರೊಂದಿಗೆ ಗೋಕಾಕ ತಾಲೂಕಿನ ಸ್ಥಳೀಯ ಶಾಸನ ಮತ್ತು ಇತರ ಕುರುಹುಗಳನ್ನು ಸಂದರ್ಭಾನುಸಾರವಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ಈ ತಾಲೂಕಿನ ಸುತ್ತಮುತ್ತಲಿನ ತಾಲೂಕುಗಳ ಶಾಸನಗಳನ್ನೂ ಪೂರಕವಾಗಿಟ್ಟುಕೊಂಡು ಗೋಕಾಕ ತಾಲೂಕಿನಲ್ಲಿ ಆರಂಭದಿಂದ ಸ್ವಾತಂತ್ರ್ಯದ ಪೂರ್ವದವರೆಗಿನ ಕಾಲಾವಧಿಯಲ್ಲಿ ಆಳ್ವಿಕೆ ಕೈಗೊಂಡಿದ್ದ ನಂದರು, ಮೌರ್ಯರು, ಶಾತವಾಹನರು, ಬನವಾಸಿ ಕದಂಬರು, ಬಾದಾಮಿ ಚಲುಕ್ಯರು, ಮಳಖೇಡದ ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಸವದತ್ತಿಯ ರಟ್ಟರು, ಕಲ್ಯಾಣದ ಕಲಚೂರಿಯರು, ದೇವಗಿರಿಯ ಸೇವುಣರ ಇತಿಹಾಸವನ್ನು ಗಮನಿಸಲಾಗಿದೆ. ಅವುಗಳಲ್ಲಿ ಜೈನ ಧರ್ಮಕ್ಕೆ ಆಶ್ರಯ-ಪ್ರೋತ್ಸಾಹ ಕೊಡಮಾಡಿದ ಮನೆತನಗಳ ಇತಿಹಾಸಕ್ಕೆ ಹೆಚ್ಚು ಒತ್ತು ಕೊಡಲಾಗಿದೆ.

'ಜೈನ ಶಾಸನಗಳು' ಎಂಬ ೩ನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಹಿನ್ನೆಲೆಯಾಗಿ ಶಾಸನಗಳ ಅರ್ಥ, ಮಹತ್ವ, ಪ್ರಕಾರಗಳು, ಸ್ವರೂಪ ಇತ್ಯಾದಿ ವಿಚಾರಗಳೊಂದಿಗೆ ಗೋಕಾಕ ತಾಲೂಕಿನ ಒಟ್ಟು ಜೈನ ಶಾಸನಗಳನ್ನು ಅಕಾರಾದಿಯಾಗಿ ಗ್ರಾಮವಾರು ಪಠ್ಯ ಮತ್ತು ಸಾರಾಂಶದೊಂದಿಗೆ ಪಟ್ಟಿ ಕೊಡಲಾಗಿದೆ. ಜೊತೆಗೆ ಈ ಶಾಸನಗಳಲ್ಲಿ ಉಲ್ಲೇಖಿತ ಮಂತ್ರಿಗಳು ಮತ್ತು ಅಧಿಕಾರಿಗಳು, ಆಡಳಿತ ವಿಭಾಗಗಳು, ಮುನಿಗಳು, ಆರ್ಯಿಕೆಯರು ಮತ್ತು ಭಟ್ಟಾರಕರು, ಸಾಮಾಜಿಕ ಮತ್ತು ಆರ್ಥಿಕ ಅಂಶಗಳು, ಶಾಸನ ಸಾಹಿತ್ಯ, ಕವಿಗಳು ಮತ್ತು ವಿದ್ವಾಂಸರ ಕುರಿತು ಅಧ್ಯಯನ ಮಾಡಲಾಗಿದೆ.

'ಜೈನ ಬಸದಿಗಳು' ಎಂಬ ೪ನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಹಿನ್ನೆಲೆಯಾಗಿ ಕನ್ನಡ ನಾಡಿನ ಸಂದರ್ಭದಲ್ಲಿ ಬಸದಿಗಳ ನಿರ್ಮಾಣದ ಪ್ರಾರಂಭ ಮತ್ತು ವಿವಿಧ ಶೈಲಿ ಹಾಗೂ ವಿನ್ಯಾಸದ ಬಸದಿಗಳ ಬೆಳವಣಿಗೆಯನ್ನು ಗಮನಿಸಿದೆ. ಗೋಕಾಕ ತಾಲೂಕಿನ ಕೊಣ್ಣೂರದ ಪಾರ್ಶ್ವನಾಥ, ಕಲ್ಲೋಳಿಯ ತ್ರಿಕೂಟ ವಿನ್ಯಾಸದ ಶಾಂತಿನಾಥ ಬಸದಿಗಳ ಕಾಲಮಾನ, ನಿರ್ಮಾತೃರು ಮತ್ತು ಅವುಗಳ ವಾಸ್ತು ಲಕ್ಷಣಗಳು, ಕಾಲಾಂತರದಲ್ಲಿ ಜೀರ್ಣೋದ್ಧಾರವಾಗಿರುವ ಗೋಕಾಕದ ಸುಪಾರ್ಶ್ವನಾಥ ಮತ್ತು ಕುಲಗೋಡದ ಪಾರ್ಶ್ವನಾಥ ಬಸದಿಗಳು, ಪರಿವರ್ತಿತವಾಗಿರುವ ಯಾದವಾಡದ ಕಾಶಿ ಈಶ್ವರಲಿಂಗ ದೇವಾಲಯ ಮತ್ತು ಸಮೂಲನಾಶವಾಗಿರುವ ಗೋಕಾಕದ ಶಾಂತಿನಾಥ ಬಸದಿ, ಕುಂದರಗಿ ಗ್ರಾಮದಲ್ಲಿದ್ದ ಬಸದಿಯ ಕುರಿತು ವಿಶ್ಲೇಷಿಸಲಾಗಿದೆ.

'ಜೈನ ಶಿಲ್ಪಗಳು' ಎಂಬ ೫ನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಹಿನ್ನೆಲೆಯಾಗಿ ಜೈನ ಶಿಲ್ಪಗಳ ನಿರ್ಮಾಣದ ಪ್ರಾರಂಭ, ಬೆಳವಣಿಗೆ, ಲಕ್ಷಣಗಳನ್ನು ಪರಿಚಯಿಸಲಾಗಿದೆ. ಗೋಕಾಕ ತಾಲೂಕಿನ ಕೊಣ್ಣೂರ, ಕಲ್ಲೋಳಿ, ಗೋಕಾಕ, ಕುಲಗೋಡ, ಯಾದವಾಡ ಗ್ರಾಮಗಳ ಬಸದಿಗಳಲ್ಲಿ ಮತ್ತು ಅವುಗಳ ಪರಿಸರದಲ್ಲಿರುವ ತೀರ್ಥಂಕರರು ಮತ್ತು ಯಕ್ಷ-ಯಕ್ಷಿ ಶಿಲ್ಪಗಳ ಪ್ರತಿಮಾ ಲಕ್ಷಣಗಳು ಹಾಗೂ ಕೊಣ್ಣೂರ ಗ್ರಾಮದಲ್ಲಿರುವ ನಿಷಿಧಿಗಲ್ಲು ಮತ್ತು ಜೈನ ವೀರಗಲ್ಲುಗಳ ವಿವರಗಳನ್ನು ನೀಡಿ ಅವುಗಳ ಲಕ್ಷಣಗಳನ್ನು ಚರ್ಚಿಸಲಾಗಿದೆ.

'ಸಮಾರೋಪ' ಎಂಬ ೬ನೆಯ ಅಧ್ಯಾಯವು ಈ ಮೇಲಿನ ಅಧ್ಯಾಯಗಳಲ್ಲಿ ಪರಿಶೀಲಿಸಲಾದ ಮಾಹಿತಿಗಳಿಂದ ರೂಪುಗೊಂಡಿರುವ ಸಾರಾಂಶ ಮತ್ತು ನಿರ್ಣಯಗಳ ಸಾರ.

ಈ ಪ್ರಬಂಧದ ಕೊನೆಯಲ್ಲಿ ಪ್ರಸ್ತುತ ಸಂಶೋಧನ ಅಧ್ಯಯನದಲ್ಲಿ ನೆರವಾದ ಕನ್ನಡ ಮತ್ತು ಇಂಗ್ಲೀಷ್ ಕೃತಿಗಳು, ಲೇಖನಗಳು, ನಿಯತಕಾಲಿಕೆಗಳ ಅಕಾರಾದಿ ಪಟ್ಟಿಯಿದೆ. ಕೊನೆಯಲ್ಲಿ ಬಸದಿ ಮತ್ತು ಶಿಲ್ಪಗಳ ಮಹತ್ವದ ಛಾಯಾಚಿತ್ರ ಹಾಗೂ ರೇಖಾಚಿತ್ರಗಳನ್ನು ಅಧ್ಯನಯಕ್ಕೆ ಪೂರಕವಾಗಿ ನೀಡಲಾಗಿದೆ.

## ಅಡಿಟಿಪ್ಪಣೆಗಳು

1. ಶಿವತಾರಕ್ ಕೆ. ಬಿ., ಕರ್ನಾಟಕದ ಪುರಾತತ್ವ ನೆಲೆಗಳು (೨೦೦೧), ಪು. ೫೦೪-೫೦೭.
2. ಕಾಮತ್ ಸೂರ್ಯನಾಥ (ಸಂ.), ಬೆಳಗಾವಿ ಜಿಲ್ಲೆಯ ಗೆಜೆಟಿಯರ್ (೧೯೮೭), ಪು. ೧-೭೦.
3. ಕಟ್ಟಿ ವೆಂಕಟರಂಗೊ, ಧಾರವಾಡ, ಬೆಳಗಾವಿ, ಬಿಜಾಪುರ, ಕಾನಡಾ ಜಿಲ್ಲೆಗಳ ಗೆಜೆಟಿಯರ್ (೧೯೮೪), ಏಶಿಯನ್ ಏಜ್ಯುಕೇಶನ್ ಸರ್ವಿಸಿಸ್, ನವದೆಹಲಿ.
4. ಕಾಮತ್ ಸೂರ್ಯನಾಥ (ಸಂ.), ಪೂರ್ವೋಕ್ತ, ಬೆಂಗಳೂರು.
5. ಜೇಮ್ಸ್ ಎಂ. ಕ್ಯಾಂಬೆಲ್ (ಸಂ.), ಗೆಜೆಟಿಯರ್ ಆಫ್ ಬೆಳಗಂ (೨೦೦೪ - ಪುನರ್ ಮುದ್ರಣ), ಬೆಂಗಳೂರು.
6. ರಾಯಲ್ ಏಶಿಯಾಟಿಕ್ ಸೊಸೈಟಿ ಆಫ್ ಬಾಂಬೆ.
7. ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.
8. ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ದೆಹಲಿ.
9. ದೇಸಾಯಿ ಪಿ. ಬಿ., ಜೈನಿಸಂ ಇನ್ ಸೌಥ್ ಇಂಡಿಯಾ ಆ್ಯಂಡ್ ಸಮ್ ಜೈನ್ ಎಪಿಗ್ರಾಫ್ಸ್ (೧೯೫೭), ಜೈನ ಸಂಸ್ಕೃತಿ ಸಂಘ, ಸೋಲಾಪೂರ.
10. ಪಾಟೀಲ ಮನೋಜ, ಬೆಳಗಾವಿ ಜಿಲ್ಲಾ ಮಾರ್ಗದರ್ಶಿ (೧೯೮೭), ಪವನ ಪ್ರಕಾಶನ, ಬೆಳಗಾವಿ.
11. ಕೆಂಪಣ್ಣವರ ಪಿ. ಜಿ. ಮತ್ತು ಜೋಡಟ್ಟಿ ಟಿ. ಆರ್. (ಸಂ.), ಜೈನ ಕ್ಷೇತ್ರಗಳ ಐತಿಹ್ಯ (೧೯೯೦), ಬಿ. ಬಿ. ಕರ್ಣವಾಡಿ ಮುದ್ರಣಾಲಯ, ಹಾರೂಗೇರಿ.
12. ಗುರವ ಆರ್. ಎನ್., "ಪಾರ್ಶ್ವಪಂಡಿತನ ಕಲ್ಲೊಳೆಯ ಶಾಸನ", ಕರ್ನಾಟಕ ಭಾರತಿ ಸಂ. ೬/೩ (ಜನೇವರಿ-೧೯೭೪), ಪು. ४३-೫४.
13. ತಬೋಜಿ ಚಂದ್ರಶೇಖರ, "ಕೊಣ್ಣೂರಿನ ಒಂದು ಜಿನಬಿಂಬ ಶಾಸನ", ಶಾಸನ ಅಧ್ಯಯನ ಸಂ. ೨ (೨೦೦೪), ಪು. ೨೦-೨೧ ಮತ್ತು "ಗೋಕಾಕದ ಜಿನಬಿಂಬ ಶಾಸನ", ಸ್ಟಡೀಜ್ ಇನ್ ಕರ್ನಾಟಕ ಹಿಸ್ಟ್ರಿ ಆ್ಯಂಡ್ ಕಲ್ಚರ್ ಪ್ರೊಸಿಡಿಂಗ್ಸ್ ವೆಲ್ಯೂಮ್-VII (೨೦೦೬), ಪು. ೧೭೩.
14. ಹಂಜೆ ಅಪ್ಪಣ್ಣ ಎನ್., "ಬೆಳಗಾವಿ ಜಿಲ್ಲೆಯ ಬಸದಿಗಳು ಮತ್ತು ಶಿಲ್ಪಗಳು" (ಅಚ್ಚಿನಲ್ಲಿದೆ). "ಗೋಕಾಕ ತಾಲ್ಲೂಕಿನ ಶಾಸನಗಳು", ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೮೬/೦೧-೦೪ (ಜನವರಿ-ಡಿಸೆಂಬರ್-೨೦೦೮), ಪು. ೧೧-೧೭.
15. ಪಾಟೀಲ ಶಿ. ಬಾ., ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ (೧೯೯೫), ಬಸವಶ್ರೀ ಪ್ರಕಾಶನ, ಸಂಕೇಶ್ವರ.
16. ಹಂದೂರ ಬಿ. ಆರ್., ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ (೨೦೦೩), ಶ್ರೀ ಅಜಿತ ಕುಚನೂರೆ, ವಿಜಾಪುರ.
17. ಚಲವಾದಿ ಎಸ್. ಜಿ., ಬೆಳಗಾವಿ ಜಿಲ್ಲೆಯ ಜೈನ ವಾಸ್ತು ಶಿಲ್ಪಕಲೆ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ-೨೦೦೨), ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.
18. ಇಚ್ಚಂಗಿ ರಾಜಶೇಖರ, ಪಾರ್ಶ್ವನಾಥ ಪುರಾಣ : ಒಂದು ತೌಲನಿಕ ಅಧ್ಯಯನ (೨೦೦೦), ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೋಳ.



ಅಧ್ಯಾಯ : ಎರಡು

# ಜೈನಧರ್ಮ ಮತ್ತು ರಾಜಾಶ್ರಯ

## ೧. ಪೀಠಿಕೆ

ಜೈನ ಧರ್ಮದ ವಿಚಾರ ಪ್ರಣಾಳಿಯಂತೆ ಕಾಲಮಾನವು (ಕಾಲಲಬ್ಧಿ) ಭೂತ, ವರ್ತಮಾನ, ಭವಿಷ್ಯಗಳೆಂಬ ಮೂರು ನಿರಂತರ ಘಟ್ಟಗಳನ್ನೊಳಗೊಂಡಿದೆ. ಅನಾದಿಯೂ ಅನಂತವೂ ಆಗಿರುವ ಕಾಲಮಾನವು ಚಕ್ರಾಕಾರವಾಗಿದ್ದು, ಏರಿಳಿತಗಳು ಅದರ ಲಕ್ಷಣಗಳಾಗಿವೆ. ಏರುವಿಕೆಯನ್ನು 'ಉತ್ಸರ್ಪಿಣಿ' ಎಂದೂ ಇಳಿಯುವಿಕೆಯನ್ನು 'ಅವಸರ್ಪಿಣಿ' ಎಂದೂ ಕರೆಯಲಾಗಿದೆ. ಉತ್ಸರ್ಪಿಣಿಯನ್ನು ದುಷಮಾ-ದುಷಮಾ, ದುಷಮಾ, ದುಷಮಾ-ಸುಷಮಾ, ಸುಷಮಾ-ದುಷಮಾ, ಸುಷಮಾ, ಸುಷಮಾ-ಸುಷಮಾ ಎಂದು ಆರು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ಅವಧಿಯಲ್ಲಿ ಧರ್ಮ, ಸತ್ಯ, ನ್ಯಾಯ, ಆಯುಷ್ಯ, ಸುಖಗಳು ಹೆಚ್ಚುತ್ತ ಹೋಗುತ್ತವೆ. ಅವಸರ್ಪಿಣಿಯನ್ನು ಸುಷಮಾ-ಸುಷಮಾ, ಸುಷಮಾ, ಸುಷಮಾ-ದುಷಮಾ, ದುಷಮಾ-ಸುಷಮಾ, ದುಷಮಾ, ದುಷಮಾ-ದುಷಮಾ ಎಂದು ಆರು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ಅವಧಿಯಲ್ಲಿ ಈ ಮೇಲಿನ ಕ್ರಿಯೆಗಳು ಕಡಿಮೆಯಾಗುತ್ತ ಬರುತ್ತವೆ. ಈ ಕಾಲವಿಭಾಗಗಳು ತಿರುಗುತ್ತಿರುವ ಚಕ್ರದ ಅರೆಗಳು ಕೆಳಗಿನಿಂದ ಮೇಲಕ್ಕೂ ಮೇಲಿನಿಂದ ಕೆಳಕ್ಕೂ ಆಗುವಂತೆ ಒಂದರ ಹಿಂದೊಂದು ಬಂದು ಹೋಗುತ್ತಿರುತ್ತವೆ. ಹೀಗಾಗಿ ಪ್ರಪಂಚ ಒಮ್ಮೆ ಸುಖದಿಂದ ದುಃಖದೆಡೆಗೂ ಮತ್ತೊಮ್ಮೆ ದುಃಖದಿಂದ ಸುಖದೆಡೆಗೂ ಚಲಿಸುತ್ತಿರುತ್ತದೆ. ಈ ಎರಡೂ ಕಾಲಗಳ ಪ್ರಮಾಣ ಹತ್ತುಸಾವಿರ ಕೋಟಿ ವರ್ಷಗಳು. ಇವೆರಡೂ ಕಾಲಗಳು ಒಟ್ಟು ಸೇರಿದರೆ ಒಂದು ಕಲ್ಪಕಾಲವಾಗುತ್ತದೆ. ಈ ಕಲ್ಪದ ಅವಧಿ ಇಪ್ಪತ್ತು ಸಾಗರೋಪಮ ಕೋಟಿ ವರ್ಷಗಳು. ಉತ್ಸರ್ಪಿಣಿ ಕಾಲದ ಸುಷಮಾ-ದುಷಮಾ (ಸುಖ-ದುಃಖ) ಮತ್ತು ಅವಸರ್ಪಿಣಿ ಕಾಲದ ದುಷಮಾ-ಸುಷಮಾ (ದುಃಖ-ಸುಖ) ಅವಧಿಗಳಲ್ಲಿ ಕಾಲಾಂತರದಲ್ಲಿ ಇಪ್ಪತ್ನಾಲ್ಕು ತೀರ್ಥಂಕರರು ಜನ್ಮವೆತ್ತಿ ಕಠಿಣವಾದ ತಪಸ್ಸಿನ ಮೂಲಕ ಕೇವಲಜ್ಞಾನವನ್ನು ಪಡೆದು ಭವಸಾಗರದಲ್ಲಿ ಮುಳುಗಿ ಧರ್ಮವನ್ನೇ ಮರೆತ ಜೀವಾತ್ಮರಿಗೆ ಆತ್ಮಕಲ್ಯಾಣದ ಮಾರ್ಗವನ್ನು ಉಪದೇಶಿಸಿ ಸನ್ಮಾರ್ಗದ ದಾರಿ ತೋರಿಸುತ್ತ ಧರ್ಮವನ್ನು ಪುನರುಜ್ಜೀವನ ಕೈಗೊಳ್ಳುತ್ತಿರುತ್ತಾರೆ.

ಪ್ರಸ್ತುತ ಪ್ರಗತಿಯಲ್ಲಿರುವ ಅವಸರ್ಪಿಣಿ ಕಾಲಕ್ಕಿಂತ ಮುಂಚಿನ ಉತ್ಸರ್ಪಿಣಿ ಕಾಲದ ಸುಷಮಾ-ದುಷಮಾ ಅವಧಿಯಲ್ಲಿ ಇಪ್ಪತ್ನಾಲ್ಕು ತೀರ್ಥಂಕರರು ಜನ್ಮವೆತ್ತಿ ಧರ್ಮವನ್ನು ಪುನರುಜ್ಜೀವನ ಕೈಗೊಂಡಿದ್ದಾರೆ. ಅವರನ್ನು ಭೂತಕಾಲದ ತೀರ್ಥಂಕರರೆಂದು ಕರೆಯಲಾಗಿದೆ. ಈಗ ಅವಸರ್ಪಿಣಿ ಕಾಲದ ದುಷಮಾ ಅವಧಿ ಪ್ರಗತಿಯಲ್ಲಿದೆ. ಇದರ ಮುಂಚಿನ ಅವಧಿಯಲ್ಲಿ ಇಪ್ಪತ್ನಾಲ್ಕು ತೀರ್ಥಂಕರರು ಜನ್ಮವೆತ್ತಿ ಧರ್ಮೋಪದೇಶವನ್ನು ಕೈಗೊಂಡಿದ್ದಾರೆ. ಅವರನ್ನು ವರ್ತಮಾನ ಕಾಲದ ತೀರ್ಥಂಕರರೆಂದು ಕರೆಯಲಾಗಿದೆ. ಮುಂದಣ ಉತ್ಸರ್ಪಿಣಿ ಕಾಲದಲ್ಲಿ ಜನ್ಮವೆತ್ತುವ ಇಪ್ಪತ್ನಾಲ್ಕು ತೀರ್ಥಂಕರರನ್ನು ಭವಿಷ್ಯತ್ಕಾಲದ ತೀರ್ಥಂಕರರೆಂದು ಕರೆಯಲಾಗಿದೆ. ಆದಿನಾಥ, ಅಜಿತನಾಥ, ಸಂಭವನಾಥ, ಅಭಿನಂದನನಾಥ, ಸುಮತಿನಾಥ, ಪದ್ಮಪ್ರಭನಾಥ, ಸುಪಾರ್ಶ್ವನಾಥ, ಚಂದ್ರಪ್ರಭನಾಥ,

ಪುಷ್ಪದಂತನಾಥ, ಶೀತಲನಾಥ, ಶ್ರೇಯಾಂಸನಾಥ, ವಾಸುಪೂಜ್ಯನಾಥ, ವಿಮಲನಾಥ, ಅನಂತನಾಥ, ಧರ್ಮನಾಥ, ಶಾಂತಿನಾಥ, ಕಂಥುನಾಥ, ಅರಹನಾಥ, ಮಲ್ಲಿನಾಥ, ಮುನಿಸುವ್ರತನಾಥ, ನಮಿನಾಥ, ನೇಮಿನಾಥ, ಪಾರ್ಶ್ವನಾಥ, ಮಹಾವೀರ ಇವರು ವರ್ತಮಾನ ಕಾಲದ ತೀರ್ಥಂಕರರಾಗಿದ್ದಾರೆ. ಇವರೆಲ್ಲರೂ ಆಯಾ ಕಾಲದಲ್ಲಿ ಧರ್ಮೋಪದೇಶದ ಮೂಲಕ ಸಮಾಜವನ್ನು ಜಾಗೃತಗೊಳಿಸಿದ್ದಾರೆ. ಮಹಾವೀರ ತೀರ್ಥಂಕರನ ತರುವಾಯ ಕ್ರಮವಾಗಿ ಮೂವರು ಕೇವಲಿಗಳು, ಐವರು ದ್ವಾದಶಾಂಗ ಶ್ರುತಕೇವಲಿಗಳು, ಹನ್ನೊಂದು ಜನ ದಶಪೂರ್ವಧರರು, ಐವರು ಏಕಾದಶಾಂಗ ಶ್ರುತಧರರು, ನಾಲ್ವರು ದಶ, ನವ, ಅಷ್ಟ ಅಂಗಶ್ರುತಧರರು ಮತ್ತು ಐವರು ಏಕಾಂಗ ಶ್ರುತಧರರು ಜೈನ ಧರ್ಮದ ಪುನರುಜ್ಜೀವನ ಕಾರ್ಯವನ್ನು ಕೈಗೊಂಡಿದ್ದಾರೆ.[1] ಶ್ರುತಧರರ ತರುವಾಯ ಇಂದಿನವರೆಗೂ ಸಾವಿರಾರು ಜೈನ ಮುನಿಗಳು, ಆರ್ಯಿಕೆಯರು, ಭಟ್ಟಾರಕರು, ಕವಿಗಳು ಧರ್ಮದ ಪ್ರಸಾರ ಕೈಗೊಂಡು ಸಮಾಜವನ್ನು ಜಾಗೃತಗೊಳಿಸುತ್ತಿದ್ದಾರೆ.

ತೀರ್ಥಂಕರರೆಲ್ಲರೂ ಸ್ವಂತ ತಪದ ಬಲದಿಂದ ತಮ್ಮ ಜ್ಞಾನಾವರಣೀಯ ಮೊದಲಾದ ಎಂಟು ಕರ್ಮಗಳನ್ನು ಗೆದ್ದು (ಅವುಗಳಿಂದ ಬಿಡುಗಡೆ ಪಡೆದು) ತೀರ್ಥಂಕರರಾಗಿದ್ದಾರೆ. ತೀರ್ಥಂಕರರಿಂದ (ಜಿನರು) ಬೋಧಿಸಲ್ಪಟ್ಟ ಧರ್ಮವೇ (ಉಪದೇಶ) ಜೈನ ಧರ್ಮ. ತೀರ್ಥಂಕರರನ್ನು ತಮ್ಮ ದೇವರೆಂದು, ಮಾರ್ಗದರ್ಶಕರೆಂದು ಪೂಜಿಸುವವರನ್ನು ಜೈನ ಧರ್ಮೀಯರು (ಜೈನರು) ಎಂದು ಕರೆಯಲಾಗಿದೆ. ಈ ಧರ್ಮೀಯರು ಮಹಾವೀರ ತೀರ್ಥಂಕರನು ಉಪದೇಶಿಸಿದ ತತ್ವಗಳನ್ನು ಹನ್ನೆರಡು ದ್ವಾದಶಾಂಗ ಮತ್ತು ಹದಿನಾಲ್ಕು ಅಂಗಬಾಹ್ಯ ಶ್ರುತಗಳಲ್ಲಿ ಸಂಗ್ರಹಿಸಿ ಅವು ತಮ್ಮ ಸಿದ್ಧಾಂತಗಳೆಂದು ಪಾಲಿಸಿಕೊಂಡು ಬಂದಿದ್ದಾರೆ. ಈ ಸಿದ್ಧಾಂತದ ಪ್ರಕಾರ ಲೋಕವೂ ಅನಾದಿಯಾಗಿದೆ. ಕರ್ಮವೂ ಅನಾದಿಯಾಗಿದೆ. ಅನಾದಿಯಿಂದಲೂ ಸ್ವಭಾವತಃ ಶುದ್ಧವಾದ ಜೀವವು ಕರ್ಮದೊಡನೆ ಸೇರಿ ದುಃಖ ಪಡುತ್ತಿದೆ. ಜೀವವು ಸ್ವಾಭಾವಿಕವಾಗಿ ಜ್ಞಾನಮಯವಾದರೂ ದೇಹಯುಕ್ತವಾಗಿ ಸರ್ವ ಕರ್ಮಗಳನ್ನೂ ಮಾಡುತ್ತದೆ. ತಪಸ್ಸು, ಧ್ಯಾನ, ಸಂಯಮ ಮೊದಲಾದವುಗಳ ಸಾಧನೆಯಿಂದ ಕರ್ಮಗಳಿಂದ ಪರಿಪೂರ್ಣವಾಗಿ ಮುಕ್ತಿಯನ್ನು ಪಡೆಯಬಹುದು. ಹೀಗೆ ಮುಕ್ತಿಯನ್ನು ಪಡೆದ ಜೀವಿಯನ್ನೇ ಜೈನ ಧರ್ಮೀಯರು ದೇವರೆಂದು ಆರಾಧಿಸುತ್ತಾರೆ. ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ ಮತ್ತು ಸಮ್ಯಗ್ ಚಾರಿತ್ರ್ಯ ಇವು ಜೈನ ಧರ್ಮದ ಮೂರು ಪ್ರಧಾನ ತತ್ವಗಳಾಗಿವೆ.

ಈ ಧರ್ಮದ ದರ್ಶನವು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ ಮತ್ತು ಮೋಕ್ಷ ಎಂಬ ಏಳು ತತ್ವಗಳನ್ನು ಒಳಗೊಂಡಿದೆ. ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಇವು ಈ ಧರ್ಮದ ಆರು ದ್ರವ್ಯಗಳಾಗಿವೆ. ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶ ಇವು ಈ ಧರ್ಮದ ಪಂಚಾಸ್ತಿಕಾಯಗಳಾಗಿವೆ. ಇತರ ಧರ್ಮಗಳಲ್ಲಿ ಕರ್ಮಬಂಧನಕ್ಕೊಳಗಾದ ಜೀವವನ್ನು ದೇವರು ಕರುಣಿಸಿ ಅವುಗಳಿಂದ ಬಿಡುಗಡೆಗೊಳಿಸುತ್ತಾನೆ. ಆದರೆ ಜೈನ ಧರ್ಮದಲ್ಲಿ ಜೀವವೇ ಸ್ವಪ್ರಯತ್ನದಿಂದ ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ, ವೇದನೀಯ, ಆಯು, ನಾಮ, ಗೋತ್ರ ಎಂಬ ಎಂಟು ಪ್ರಕಾರದ ಕರ್ಮಬಂಧನಗಳಿಂದ ಬಿಡುಗಡೆಯಾಗುವುದು ವೈಶಿಷ್ಟ್ಯವಾಗಿದೆ. ಈ ಧರ್ಮವು ಸೃಷ್ಟಿಯ ಮೂರು ಸ್ಥಿತಿಗಳನ್ನು

ಒತ್ತಿ ಹೇಳುವುದರಲ್ಲಿ ತೃಪ್ತವಾಗದೇ ಅನೇಕಾಂತ (ಸ್ಯಾದ್ವಾದ) ದೃಷ್ಟಿಯ ಆಧಾರದ ಮೇಲೆ ಅನೇಕಾಂತವಾದ ಎಂಬ ವಿಚಾರ ಸಿದ್ಧಾಂತವನ್ನು ಸೂತ್ರೀಕರಿಸಿದೆ. ಈ ಸಿದ್ಧಾಂತವು ವಸ್ತುಗಳನ್ನು ಗಮನಿಸುವ ಒಂದು ಸಮಂಜಸ ದೃಷ್ಟಿಯ ಸುವ್ಯವಸ್ಥಿತ ರೂಪವನ್ನು ಸೂಚಿಸುತ್ತದೆ.[2]

ಉತ್ತರ ಭಾರತದಲ್ಲಿ ಕ್ರಿ. ಪೂ. ಸುಮಾರು ೪ನೆಯ ಶತಮಾನದಲ್ಲಿ ಉಂಟಾದ ಹನ್ನೆರಡು ವರ್ಷಗಳ ಅವಧಿಯ ಬರಗಾಲವು ಜೈನ ಧರ್ಮದಲ್ಲಿ ಎರಡು ಪಂಥಗಳುಂಟಾಗಲು ಕಾರಣವಾಯಿತು. ಆ ಸಂದರ್ಭದಲ್ಲಿ ಅಲ್ಲಿದ್ದ ಸಾವಿರಾರು ಮುನಿಗಳಲ್ಲಿ ಹನ್ನೆರಡು ಸಾವಿರ ಭದ್ರಬಾಹು ಭಟ್ಟಾರಕ ಮತ್ತು ಅವರ ಶಿಷ್ಯ ನಂದ ಮನೆತನದ ಚಂದ್ರಗುಪ್ತನ ನೇತೃತ್ವದಲ್ಲಿ ದಕ್ಷಿಣಾಪಥಕ್ಕೆ ಆಗಮಿಸಿದರು. ಮತ್ತೆ ಕೆಲವರು ರಾಮಿಲಾಚಾರ್ಯ, ಸ್ಥೂಲಾಚಾರ್ಯ ಮತ್ತು ಸ್ಥೂಲಭದ್ರಾಚಾರ್ಯರ ನೇತೃತ್ವದಲ್ಲಿ ಸಿಂಧ ಪ್ರದೇಶಕ್ಕೆ ಹೋದರು. ಆ ಪ್ರದೇಶದಲ್ಲಿ ಅತೀ ಕ್ಷಾಮದ ಪರಿಣಾಮವಾಗಿ ಹಗಲು ಹೊತ್ತು ನರಭಕ್ಷಕರ ಹಿಂಸೆ ನಡೆಯುತ್ತಿತ್ತು. ಹೀಗಾಗಿ ಮುನಿಗಳು ರಾತ್ರಿಹೊತ್ತು ಭಿಕ್ಷೆಮಾಡಿ ಹಗಲು ಆಹಾರ ಸೇವಿಸುತ್ತಿದ್ದರು. ಒಂದು ದಿನ ರಾತ್ರಿ ಗರ್ಭಿಣಿಯೊಬ್ಬಳು ದಿಗಂಬರ ಮುನಿಯನ್ನು ಕಂಡು ಹೆದರಿದರಿಂದ ಅವಳಿಗೆ ಗರ್ಭಪಾತವಾಯಿತು. ಹೀಗಾಗಿ ಅಲ್ಲಿಯ ಮುನಿಗಳೆಲ್ಲರೂ ಅರ್ಧವಸ್ತ್ರ ಧರಿಸಲು ಪ್ರಾರಂಭಿಸಿದರು. ಹನ್ನೆರಡು ವರ್ಷಗಳ ಬರಗಾಲದ ತರುವಾಯ ಸಿಂಧ ಮತ್ತು ದಕ್ಷಿಣಾಪಥದ ಎರಡೂ ಮುನಿ ಸಮುದಾಯಗಳು ತಮ್ಮ ಮೂಲ ಸ್ಥಾನಕ್ಕೆ (ಉಜ್ಜೈನಿ) ಆಗಮಿಸಿದವು. ಅವರಲ್ಲಿ ದಕ್ಷಿಣಾಪಥಕ್ಕೆ ಆಗಮಿಸಿದ್ದ ಮುನಿಗಳೆಲ್ಲರೂ ದಿಗಂಬರರಾಗಿಯೇ ಇದ್ದರು. ಆದರೆ ಉತ್ತರಾಪಥಕ್ಕೆ ತೆರಳಿದ್ದ ಮುನಿಗಳು ಅರ್ಧವಸ್ತ್ರವನ್ನು ಧರಿಸುವ ಪರಂಪರೆಯನ್ನು ಮುಂದುವರಿಸಿ ಶ್ವೇತಾಂಬರ ಪಂಥದ ಉಗಮಕ್ಕೆ ನಾಂದಿ ಹಾಡಿದರು. ಈ ಎರಡೂ ಪಂಥಗಳ ಆಚಾರ-ವಿಚಾರಗಳಲ್ಲಿ ಕೆಲವೊಂದು ಭಿನ್ನಾಭಿಪ್ರಾಯಗಳಿವೆ. ದಿಗಂಬರರ ಪ್ರಕಾರ ಸ್ತ್ರೀಯರಿಗೆ ಮೋಕ್ಷವಿಲ್ಲ. ಅವರು ಮುಂದಣ ಜನ್ಮದಲ್ಲಿ ಪುರುಷರಾಗಿ ಜನ್ಮವೆತ್ತಿ ಮೋಕ್ಷ ಪಡೆಯಬೇಕು. ಶ್ವೇತಾಂಬರರ ಪ್ರಕಾರ ಸ್ತ್ರೀಯರಿಗೆ ಈ ಜನ್ಮದಲ್ಲಿಯೇ ಮೋಕ್ಷ ಸಾಧ್ಯವಿದೆ. ೧೯ನೆಯ ತೀರ್ಥಂಕರ ಮಲ್ಲಿ ಎಂಬಾತಳು ಇದಕ್ಕೆ ನಿದರ್ಶನಳಾಗಿದ್ದಾಳೆ. ದಿಗಂಬರರ ಪ್ರಕಾರ ಜೈನ ಧರ್ಮದ ಪ್ರಾಚೀನ ಕೃತಿಗಳೆಲ್ಲವೂ ಹಾಳಾಗಿದ್ದು, ಆದರೆ ಶ್ವೇತಾಂಬರರು ಹಾಳಾಗಿಲ್ಲವೆಂದು ವಾದಿಸುತ್ತಾರೆ. ದಿಗಂಬರರ ಪ್ರಕಾರ ತೀರ್ಥಂಕರರ ಶಿಲ್ಪಗಳು ನಗ್ನವೂ ನಿರಲಂಕೃತವೂ ಆಗಿದ್ದು, ಶ್ವೇತಾಂಬರರ ಪ್ರಕಾರ ಇವು ವಸ್ತ್ರಾಭರಣಗಳಿಂದ ಅಲಂಕೃತವಾಗಿರುತ್ತವೆ. ದಿಗಂಬರರ ಪ್ರಕಾರ ಕೇವಲಜ್ಞಾನಿಗೆ ಆಹಾರದ ಅವಶ್ಯವಿಲ್ಲ. ಶ್ವೇತಾಂಬರರ ಪ್ರಕಾರ ಅವಶ್ಯವಿದೆ. ದಿಗಂಬರರ ಪ್ರಕಾರ ಮಹಾವೀರನಿಗೆ ವಿವಾಹವಾಗಿಲ್ಲ. ಶ್ವೇತಾಂಬರರ ಪ್ರಕಾರ ವಿವಾಹವಾಗಿದ್ದು, ಅನೂಜ್ಞಾ ಎಂಬ ಮಗಳೂ ಇದ್ದಳು.[3]

ಈ ಎರಡು ಪಂಥಗಳಲ್ಲದೇ ಇನ್ನೂ ಕೆಲವು ಪಂಥಗಳು ಪ್ರಚಲಿತದಲ್ಲಿವೆ. ಕ್ರಿ. ಶ. ೩೨೩ರಲ್ಲಿ ಶಿಥಿಲಾಚಾರಿಗಳಾದ ಕೆಲವು ಮುನಿಗಳು ವಿಹಾರವನ್ನು ತೊರೆದು ಜಿನಾಲಯಗಳಲ್ಲಿ ವಾಸಮಾಡಲು ತೊಡಗಿದ್ದರಿಂದ ಚೈತ್ಯವಾಸಿಗಳ ಶ್ವೇತಾಂಬರ ಪಂಥ ಪ್ರಚಲಿತಕ್ಕೆ ಬಂದಿತು. ಈ ಪಂಥದಲ್ಲಿ ೮೪ ಗಚ್ಛಗಳಿವೆ. ಅವುಗಳಲ್ಲಿ ಉಪಕೇಶಗಚ್ಛ, ಖರತರಗಚ್ಛ, ತಪಾಗಚ್ಛ, ಪಾರ್ಶ್ವಚಂದ್ರಗಚ್ಛ, ನಾರ್ಧಪೌರ್ಣಿಮೀಯಗಚ್ಛ, ಅಂಚಲಗಚ್ಛ, ಆಗಮಿಕಗಚ್ಛಗಳು ಇಂದಿಗೂ ಅಸ್ತಿತ್ವದಲ್ಲಿವೆ. ಕನ್ನಡ ನಾಡಿನ ಸಂದರ್ಭದಲ್ಲಿ ಕ್ರಿ. ಶ. ಸುಮಾರು ೨ನೆಯ ಶತಮಾನದಲ್ಲಿ ಉಗಮವಾದ ಯಾಪನೀಯ ಪಂಥವು ೧೪ನೆಯ ಶತಮಾನದವರೆಗೂ ಅಸ್ತಿತ್ವದಲ್ಲಿತ್ತು. ಕ್ರಮೇಣ

ಇದು ದಿಗಂಬರ ಪಂಥದಲ್ಲಿ ವಿಲೀನವಾಯಿತು. ಇದು ಜೈನೇತರ ಪಥಪಂಥಗಳನ್ನು ಅನುಸರಿಸಿದವರಿಗೂ ಮೋಕ್ಷವಿದೆ. ಬಟ್ಟೆ ತೊಟ್ಟಿರುವ ಸಂಸಾರಿಗಳಿಗೂ ಮೋಕ್ಷವಿದೆ. ಸ್ತ್ರೀಯರಿಗೆ ಈ ಜನ್ಮದಲ್ಲೇ ಮೋಕ್ಷ ಸಾಧ್ಯವಿದೆ ಎಂಬ ತತ್ವಗಳನ್ನು ಪ್ರತಿಪಾದಿಸಿದೆ. ಪರಿವಾರ ಜಾತಿಯಲ್ಲಿ ಜನಿಸಿದ ಮೂರ್ತಿ ಪೂಜೆ ವಿರೋಧಕ ತಾರಣತರಣನು ೧೫ನೆಯ ಶತಮಾನದಲ್ಲಿ ತಾರಣ ಪಂಥವನ್ನು ಸ್ಥಾಪಿಸಿದ್ದಾನೆ. ಆತನು ೧೫೧೫ರಲ್ಲಿ ಗ್ವಾಲಿಯರ್ ಸಂಸ್ಥಾನದ ಮಲ್ಹಾರಗಡ ಎಂಬಲ್ಲಿ ಸ್ವರ್ಗಸ್ಥನಾದ್ದರಿಂದ ಅದು ತಾರಣ ಪಂಥೀಯರ ತೀರ್ಥಸ್ಥಾನವಾಗಿದೆ. ೧೭ನೆಯ ಶತಮಾನದಲ್ಲಿ ಪಂಡಿತ ಬನಾರಸಿದಾಸನು ಭಟ್ಟಾರಕ ಯುಗದ ಶಿಥಿಲಾಚಾರ್ಯವನ್ನು ವಿರೋಧಿಸುವುದಕ್ಕೆ ಆಗ್ರಾದಲ್ಲಿ ತೇರ ಪಂಥವನ್ನು ಸ್ಥಾಪಿಸಿದನು. ಪೂರ್ವದ ಭಟ್ಟಾರಕ ಪಂಥದವರು ತಮ್ಮನ್ನು ವೀಸ ಪಂಥದವರೆಂದು ಕರೆದುಕೊಂಡಿದ್ದಾರೆ. ಕನ್ನಡ ನಾಡಿನಲ್ಲಿ ದಿಗಂಬರ ಮತ್ತು ಯಾಪನೀಯ ಪಂಥಗಳೇ ಪ್ರಧಾನವಾಗಿವೆ. ಇವುಗಳೊಂದಿಗೆ ಅಲ್ಲಲ್ಲಿ (ಮಾನ್ಯಖೇಟ, ದೇವಗಿರಿ, ಹಲಸಿ ಇತ್ಯಾದಿ) ಶ್ವೇತಾಂಬರ ಪಂಥವೂ ಅಸ್ತಿತ್ವದಲ್ಲಿತ್ತೆಂಬ ವಿಚಾರ ಸಮಕಾಲೀನ ಕೆಲವು ಶಾಸನಗಳು ಮತ್ತು ಸಾಹಿತ್ಯಿಕ (ಸಮ್ಯಕ್ತ ಸಪ್ತತಿ, ಪ್ರಶ್ನೋತ್ತರ ರತ್ನಮಾಲಾ, ಕವಿರಾಜಮಾರ್ಗ, ವಡ್ಡಾರಾಧನೆ, ಶ್ರುತಾವತಾರ ಇತ್ಯಾದಿ) ಕುರುಹುಗಳಿಂದ ಸ್ಪಷ್ಟವಾಗುತ್ತದೆ. ಉತ್ತರ ಭಾರತದಿಂದ ೧೯ನೆಯ ಶತಮಾನದಿಂದೀಚೆಗೆ ವ್ಯಾಪಾರದ ದೃಷ್ಟಿಯಿಂದ ಕನ್ನಡ ನಾಡಿಗೆ ಆಗಮಿಸಿರುವ ಶ್ವೇತಾಂಬರರು ಸ್ಥಳೀಯ ದಿಗಂಬರ ಪಂಥದೊಂದಿಗೆ ಸಾಮರಸ್ಯವನ್ನು ಸಾಧಿಸಿ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ಕೈಗೊಳ್ಳುತ್ತಿದ್ದಾರೆ.[4]

## ೨. ಕನ್ನಡ ನಾಡಿನಲ್ಲಿ ಜೈನಧರ್ಮ

ಜೈನ ಧರ್ಮವು ಕನ್ನಡ ನಾಡನ್ನು ಕ್ರಿ. ಪೂ. ಸುಮಾರು ೪ನೆಯ ಶತಮಾನದಲ್ಲಿ ಪ್ರವೇಶಿಸಿತ್ತೆಂದು ಹೇಳಲಾಗುತ್ತದೆ. ಮಹಾವೀರ ತೀರ್ಥಂಕರನ ತರುವಾಯ ಧರ್ಮ ಪ್ರಸಾರ ಮಾಡಿದ ಐವರು ದ್ವಾದಶಾಂಗ ಶ್ರುತಕೇವಲಿಗಳಲ್ಲಿ ಕೊನೆಯವರಾದ ಭದ್ರಬಾಹು ಭಟ್ಟಾರಕರು (ಇವರ ಪಟ್ಟಾಭಿಷಿಕ್ತ ಕಾಲ ಕ್ರಿ. ಪೂ. ೩೯೪-೩೬೫) ಉಜ್ಜೈನಿಯಲ್ಲಿದ್ದ ಸಂದರ್ಭದಲ್ಲಿ ಉತ್ತರ ಭಾರತದಲ್ಲಿ ಮುಂದಣ ಹನ್ನೆರಡು ವರ್ಷಗಳ ಕಾಲ ಕ್ಷಾಮವುಂಟಾಗುತ್ತದೆ ಎಂಬುದನ್ನು ತಮ್ಮ ದಿವ್ಯದೃಷ್ಟಿಯಿಂದ ಅರಿತು ಮುನಿಸಮುದಾಯದ ಚಾರಿತ್ರ್ಯ ಮತ್ತು ಸಂಯಮದ ಪಾಲನೆಗಾಗಿ ತಮ್ಮ ಪ್ರಧಾನ ಶಿಷ್ಯ ನಂದ ಮನೆತನದ ಚಂದ್ರಗುಪ್ತ (ಕ್ರಿ. ಪೂ. ೩೨೨-೩೬೬) ಹಾಗೂ ಹನ್ನೆರಡು ಸಾವಿರ ಮುನಿಗಳೊಂದಿಗೆ ಕನ್ನಡ ನಾಡಿನ ಶ್ರವಣಬೆಳಗೊಳಕ್ಕೆ ಆಗಮಿಸಿದರೆಂದು ಅನೇಕ ಶಾಸನಗಳು ಮತ್ತು ಕೃತಿಗಳು ಉಲ್ಲೇಖಿಸಿವೆ. ಭದ್ರಬಾಹು ಭಟ್ಟಾರಕರು ನೇರವಾಗಿ ಕನ್ನಡ ನಾಡಿಗೆ ಬರಬೇಕಾದರೆ ಆ ಮೊದಲು ಇಲ್ಲಿ ಜೈನಧರ್ಮ ಅಸ್ತಿತ್ವದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಕಾರಣ ಅವರಿಗೆ ಇಲ್ಲಿ ತಮ್ಮ ಮುನಿ ಸಮುದಾಯದ ಸಂರಕ್ಷಣೆ ಸುವ್ಯವಸ್ಥಿತವಾಗಿ ಜರುಗುವುದೆಂಬ ನಂಬಿಕೆಯಿತ್ತು. ೧ನೆಯ ತೀರ್ಥಂಕರ ಆದಿನಾಥನು ದಕ್ಷಿಣಾಪಥದ ಕೊಂಗು, ವೆಂಗಡ, ಶಂಕಟ, ಕರ್ನಾಟ, ಕುಟಚಾದ್ರಿಗಳಲ್ಲಿ ಧರ್ಮ ಪ್ರಸಾರವನ್ನು ಕೈಗೊಂಡು ಇಲ್ಲಿಯೇ ನಿರ್ವಾಣ ಹೊಂದಿದನೆಂದು ಭಾಗವತ ಪುರಾಣವು ಉಲ್ಲೇಖಿಸಿದೆ. ೨೨ನೆಯ ತೀರ್ಥಂಕರ ನೇಮಿನಾಥನು ಯಾದವರಲ್ಲಿ ಆಂತರಿಕ ಕಲಹಗಳು ಸಂಭವಿಸಿದಾಗ ದ್ವಾರಕೆಯನ್ನು ತ್ಯಜಿಸಿ ಬಂದು ಕೆಲಕಾಲ ಕರ್ನಾಟಕದ ಪ್ರಾಂತದಲ್ಲಿ ತಪಸ್ಸು ಮಾಡಿದನೆಂಬ ಪ್ರತೀತಿಯಿದೆ. ೨೩ನೆಯ ತೀರ್ಥಂಕರ ಪಾರ್ಶ್ವನಾಥನಿಗೆ ಕೇವಲಜ್ಞಾನ ಪ್ರಾಪ್ತವಾದ ತರುವಾಯ ಆತನ ಸಮವಸರಣವು ಕರಹಾಟ, ಆಂಧ್ರ, ಕಳಿಂಗ, ವಂಗ, ಮಗಧ, ಅಂಗ, ಆಭೇರ,

ಸೌವೀರ, ಗೂರ್ಜರ, ಕರ್ಣಾಟ, ವರಾಳ, ಮಾಳವ, ಮಹಾರಾಷ್ಟ್ರ ಮೊದಲಾದೆಡೆಗಳಲ್ಲಿ ವಿಹರಿಸುತ್ತ ಸಮ್ಮೇದಗಿರಿಯನ್ನು ತಲುಪಿತು ಎಂದು ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣದಲ್ಲಿ ನಿರೂಪಣೆಯಿದೆ. ೨೪ನೆಯ ತೀರ್ಥಂಕರ ಮಹಾವೀರನು ಧರ್ಮೋಪದೇಶಕ್ಕಾಗಿ ದಕ್ಷಿಣಾಪಥದೆಡೆಗೆ ಆಗಮಿಸಿದ್ದ ಸಂದರ್ಭದಲ್ಲಿ ಹೇಮಾಂಗ ಪ್ರದೇಶದಲ್ಲಿ (ಮೈಸೂರು ಪ್ರಾಂತ) ಆಳ್ವಿಕೆ ಕೈಗೊಂಡಿದ್ದ ಸತ್ಯಂಧರ ಅರಸನ ಪುತ್ರ ಜೀವಂಧರನು ಮಹಾವೀರನ ಅನುಯಾಯಿಯಾಗಿ ತಾನೂ ಜಿನದೀಕ್ಷೆಯನ್ನು ಪಡೆದು ವೀರಸಂಘವನ್ನು ಸೇರಿದನೆಂದು ಗುಣಭದ್ರಾಚಾರ್ಯರ ಉತ್ತರಪುರಾಣ ಮತ್ತು ಭಾಸ್ಕರ ಕವಿಯ ಜೀವಂಧರ ಚರಿತೆಗಳಲ್ಲಿ ಉಲ್ಲೇಖಗಳಿವೆ. ಇಂತಹ ಇನ್ನೂ ಅನೇಕ ಜೈನ ಮತ್ತು ಜೈನೇತರ ಸಾಹಿತ್ಯಿಕ ಆಧಾರಗಳು (ಬೌದ್ಧ ಧರ್ಮದ ಮಹಾವಂಶ, ತಮಿಳು ಗ್ರಂಥಗಳಾದ ತಿರುಕ್ಕುರುಳ್, ತೊಲಕಾಪ್ಪಿಯಮ್, ನಾಲಡಿಯಾರ್ ಇತ್ಯಾದಿ) ಕನ್ನಡ ನಾಡಿನಲ್ಲಿ ಬಹು ಪ್ರಾಚೀನ ಕಾಲದಿಂದಲೂ ಜೈನ ಧರ್ಮವು ಪ್ರಚಲಿತದಲ್ಲಿತ್ತೆಂಬುದನ್ನು ದೃಢಪಡಿಸುತ್ತವೆ.[5]

ಕನ್ನಡ ನಾಡಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಕದಂಬರು, ಗಂಗರು, ಚಲುಕ್ಯರು, ರಾಷ್ಟ್ರಕೂಟರು, ಚಾಳುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಒಡೆಯರು, ಚಲ್ಲಕೇತನರು, ಸಾಳ್ವರು, ಚಂಗಾಳ್ವರು, ಕೊಂಗಾಳ್ವರು, ರಟ್ಟರು, ಶಿಲಾಹಾರರು, ಬೈರವರಸರು, ಸಾಂತರರು ಮತ್ತು ಈ ಮನೆತನಗಳ ಆಡಳಿತಾಧಿಕಾರಿಗಳು (ದಂಡನಾಯಕರು, ರಾಜಾಧ್ಯಕ್ಷರು, ಅಂತಃಪುರಾಧ್ಯಕ್ಷರು, ನಿಯೋಗಿಗಳು, ಪಡೆವಳರು, ಹಡಪವಳರು, ಪ್ರತಿಹಾರರು, ಪೆರ್ಗಡೆಗಳು, ಸೇನಬೋವರು, ಕುಳಕರಣಿಗಳು, ತಳಾರರು ಇತ್ಯಾದಿ) ಜೈನ ಧರ್ಮದ ತತ್ವ-ಸಿದ್ಧಾಂತಗಳು, ಆಚಾರ-ವಿಚಾರಗಳು, ನಂಬುಗೆ-ಸಂಪ್ರದಾಯಗಳು ಮತ್ತು ಮುನಿಗಳು, ಆರ್ಯಿಕೆಯರು, ಭಟ್ಟಾರಕರ ಉಪದೇಶಗಳಿಂದ ಪ್ರೇರಿತರಾಗಿ ಜಿನಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಷ್ಠಾಪನೆ, ಕವಿ-ವಿದ್ವಾಂಸರಿಗೆ ಆಶ್ರಯ-ಪ್ರೋತ್ಸಾಹ, ದಾನ-ದತ್ತಿಗಳು ಮೊದಲಾದ ಚಟುವಟಿಕೆಗಳನ್ನು ಕೈಗೊಂಡಿರುವ ವಿಚಾರ ಸಮಕಾಲೀನ ಜೈನ ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳಿಂದ ಮನದಟ್ಟಾಗುತ್ತದೆ. ಈ ಆಳರಸರಾದಿಯಾಗಿ ಅಧಿಕಾರಿಗಳು, ಶ್ರಾವಕರು ಮತ್ತು ಜೈನಾಭಿಮಾನಿಗಳ (ಗುಡ್ಡರು-ಗುಡ್ಡಿಯರು) ಆಶ್ರಯ-ಪ್ರೋತ್ಸಾಹದಿಂದಾಗಿ ಜೈನಧರ್ಮ ಈ ನಾಡಿನ ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಇದನ್ನು "ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನ ಧರ್ಮದ ಇತಿಹಾಸ" ಎಂಬ ಮಾತೂ ದೃಢಪಡಿಸುತ್ತದೆ.[6] ಈ ಮೇಲಿನ ಅರಸು ಮನೆತನಗಳ ಮತ್ತು ಆಡಳಿತಾಧಿಕಾರಿಗಳ ಆಶ್ರಯವನ್ನು ಪಡೆದ ಇಲ್ಲಿಯ ಜೈನಾಚಾರ್ಯರು (ಕುಂದಕುಂದಾಚಾರ್ಯ, ಉಮಾಸ್ವಾಮಿ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ದೇವನಂದಿ, ಅಕಲಂಕ, ಜಿನಸೇನ, ಗುಣಭದ್ರ, ಸಿಂಹನಂದಿ, ವಿಮಲಚಂದ್ರ, ಯತಿಸಾಗರ, ಪುಷ್ಪಸೇನ, ಸುದತ್ತಾಚಾರ್ಯ, ಮಾಘನಂದಿ ಇತ್ಯಾದಿ) ವಿಹಾರದ ಮೂಲಕ ಧರ್ಮದ ಪುನರುಜ್ಜೀವನ ಕೈಗೊಂಡು ಸಮಾಜವನ್ನು ಜಾಗೃತಗೊಳಿಸಿದ್ದಾರೆ. ಜೈನ ಕವಿಗಳು (ಭ್ರಾಜಿಷ್ಣು, ಪಂಪ, ಪೊನ್ನ, ರನ್ನ, ನೇಮಿಚಂದ್ರ, ಆಂಡಯ್ಯ, ಪಾರ್ಶ್ವಪಂಡಿತ, ಭಾಸ್ಕರ, ದ್ವಾರಪಾಲಕವಿ, ಬ್ರಹ್ಮಶಿವ, ದೇವನಂದಿ, ರತ್ನಾಕರವರ್ಣಿ, ನಾಗಚಂದ್ರ ಇತ್ಯಾದಿ) ಜೈನ ಧರ್ಮದ ತತ್ವ-ಸಿದ್ಧಾಂತಗಳನ್ನು ಕೇಂದ್ರವಾಗಿಟ್ಟುಕೊಂಡು ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಕಾವ್ಯಗಳನ್ನು ರಚಿಸಿ ಧರ್ಮ ಪ್ರಸಾರವನ್ನು ಕೈಗೊಂಡಿದ್ದಾರೆ. ಹೀಗಾಗಿ ಜೈನ ಧರ್ಮವು ಕನ್ನಡ ನಾಡಿನ ಇತಿಹಾಸದೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿದೆ.

ಸೌವೀರ, ಗೂರ್ಜರ, ಕರ್ಣಾಟ, ವರಾಳ, ಮಾಳವ, ಮಹಾರಾಷ್ಟ್ರ ಮೊದಲಾದೆಡೆಗಳಲ್ಲಿ ವಿಹರಿಸುತ್ತ ಸಮ್ಮೇದಗಿರಿಯನ್ನು ತಲುಪಿತು ಎಂದು ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣದಲ್ಲಿ ನಿರೂಪಣೆಯಿದೆ. ೨೪ನೆಯ ತೀರ್ಥಂಕರ ಮಹಾವೀರನು ಧರ್ಮೋಪದೇಶಕ್ಕಾಗಿ ದಕ್ಷಿಣಾಪಥದೆಡೆಗೆ ಆಗಮಿಸಿದ್ದ ಸಂದರ್ಭದಲ್ಲಿ ಹೇಮಾಂಗ ಪ್ರದೇಶದಲ್ಲಿ (ಮೈಸೂರು ಪ್ರಾಂತ) ಆಳ್ವಿಕೆ ಕೈಗೊಂಡಿದ್ದ ಸತ್ಯಂಧರ ಅರಸನ ಪುತ್ರ ಜೀವಂಧರನು ಮಹಾವೀರನ ಅನುಯಾಯಿಯಾಗಿ ತಾನೂ ಜಿನದೀಕ್ಷೆಯನ್ನು ಪಡೆದು ವೀರಸಂಘುವನ್ನು ಸೇರಿದನೆಂದು ಗುಣಭದ್ರಾಚಾರ್ಯರ ಉತ್ತರಪುರಾಣ ಮತ್ತು ಭಾಸ್ಕರ ಕವಿಯ ಜೀವಂಧರ ಚರಿತೆಗಳಲ್ಲಿ ಉಲ್ಲೇಖಗಳಿವೆ. ಇಂತಹ ಇನ್ನೂ ಅನೇಕ ಜೈನ ಮತ್ತು ಜೈನೇತರ ಸಾಹಿತ್ಯಿಕ ಆಧಾರಗಳು (ಬೌದ್ಧ ಧರ್ಮದ ಮಹಾವಂಶ, ತಮಿಳು ಗ್ರಂಥಗಳಾದ ತಿರುಕ್ಕುರುಳ್, ತೊಲಕಾಪ್ಪಿಯಮ್, ನಾಲಡಿಯಾರ್ ಇತ್ಯಾದಿ) ಕನ್ನಡ ನಾಡಿನಲ್ಲಿ ಬಹು ಪ್ರಾಚೀನ ಕಾಲದಿಂದಲೂ ಜೈನ ಧರ್ಮವು ಪ್ರಚಲಿತದಲ್ಲಿತ್ತೆಂಬುದನ್ನು ದೃಢಪಡಿಸುತ್ತವೆ.[5]

ಕನ್ನಡ ನಾಡಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಕದಂಬರು, ಗಂಗರು, ಚಲುಕ್ಯರು, ರಾಷ್ಟ್ರಕೂಟರು, ಚಾಳುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಒಡೆಯರು, ಚಲ್ಲಕೇತನರು, ಸಾಳ್ವರು, ಚಂಗಾಳ್ವರು, ಕೊಂಗಾಳ್ವರು, ರಟ್ಟರು, ಶಿಲಾಹಾರರು, ಬೈರವರಸರು, ಸಾಂತರರು ಮತ್ತು ಈ ಮನೆತನಗಳ ಆಡಳಿತಾಧಿಕಾರಿಗಳು (ದಂಡನಾಯಕರು, ರಾಜಾಧ್ಯಕ್ಷರು, ಅಂತಃಪುರಾಧ್ಯಕ್ಷರು, ನಿಯೋಗಿಗಳು, ಪಡೆವಳರು, ಹಡಪವಳರು, ಪ್ರತಿಹಾರರು, ಪೆರ್ಗಡೆಗಳು, ಸೇನಬೋವರು, ಕುಳಕರಣಿಗಳು, ತಳಾರರು ಇತ್ಯಾದಿ) ಜೈನ ಧರ್ಮದ ತತ್ವ-ಸಿದ್ಧಾಂತಗಳು, ಆಚಾರ-ವಿಚಾರಗಳು, ನಂಬುಗೆ-ಸಂಪ್ರದಾಯಗಳು ಮತ್ತು ಮುನಿಗಳು, ಆರ್ಯಿಕೆಯರು, ಭಟ್ಟಾರಕರ ಉಪದೇಶಗಳಿಂದ ಪ್ರೇರಿತರಾಗಿ ಜಿನಾಲಯಗಳ ನಿರ್ಮಾಣ, ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಷ್ಠಾಪನೆ, ಕವಿ-ವಿದ್ವಾಂಸರಿಗೆ ಆಶ್ರಯ-ಪ್ರೋತ್ಸಾಹ, ದಾನ-ದತ್ತಿಗಳು ಮೊದಲಾದ ಚಟುವಟಿಕೆಗಳನ್ನು ಕೈಗೊಂಡಿರುವ ವಿಚಾರ ಸಮಕಾಲೀನ ಜೈನ ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳಿಂದ ಮನದಟ್ಟಾಗುತ್ತದೆ. ಈ ಆಳರಸರಾದಿಯಾಗಿ ಅಧಿಕಾರಿಗಳು, ಶ್ರಾವಕರು ಮತ್ತು ಜೈನಾಭಿಮಾನಿಗಳ (ಗುಡ್ಡರು-ಗುಡ್ಡಿಯರು) ಆಶ್ರಯ-ಪ್ರೋತ್ಸಾಹದಿಂದಾಗಿ ಜೈನಧರ್ಮ ಈ ನಾಡಿನ ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಇದನ್ನು "ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನ ಧರ್ಮದ ಇತಿಹಾಸ" ಎಂಬ ಮಾತೂ ದೃಢಪಡಿಸುತ್ತದೆ.[6] ಈ ಮೇಲಿನ ಅರಸು ಮನೆತನಗಳ ಮತ್ತು ಆಡಳಿತಾಧಿಕಾರಿಗಳ ಆಶ್ರಯವನ್ನು ಪಡೆದ ಇಲ್ಲಿಯ ಜೈನಾಚಾರ್ಯರು (ಕುಂದಕುಂದಾಚಾರ್ಯ, ಉಮಾಸ್ವಾಮಿ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ದೇವನಂದಿ, ಅಕಲಂಕ, ಜಿನಸೇನ, ಗುಣಭದ್ರ, ಸಿಂಹನಂದಿ, ವಿಮಲಚಂದ್ರ, ಯತಿಸಾಗರ, ಪುಷ್ಪಸೇನ, ಸುದತ್ತಾಚಾರ್ಯ, ಮಾಘನಂದಿ ಇತ್ಯಾದಿ) ವಿಹಾರದ ಮೂಲಕ ಧರ್ಮದ ಪುನರುಜ್ಜೀವನ ಕೈಗೊಂಡು ಸಮಾಜವನ್ನು ಜಾಗೃತಗೊಳಿಸಿದ್ದಾರೆ. ಜೈನ ಕವಿಗಳು (ಭ್ರಾಜಿಷ್ಣು, ಪಂಪ, ಪೊನ್ನ, ರನ್ನ, ನೇಮಿಚಂದ್ರ, ಆಂಡಯ್ಯ, ಪಾರ್ಶ್ವಪಂಡಿತ, ಭಾಸ್ಕರ, ದ್ವಾರಪಾಲಕವಿ, ಬ್ರಹ್ಮಶಿವ, ದೇವನಂದಿ, ರತ್ನಾಕರವರ್ಣಿ, ನಾಗಚಂದ್ರ ಇತ್ಯಾದಿ) ಜೈನ ಧರ್ಮದ ತತ್ವ-ಸಿದ್ಧಾಂತಗಳನ್ನು ಕೇಂದ್ರವಾಗಿಟ್ಟುಕೊಂಡು ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಕಾವ್ಯಗಳನ್ನು ರಚಿಸಿ ಧರ್ಮ ಪ್ರಸಾರವನ್ನು ಕೈಗೊಂಡಿದ್ದಾರೆ. ಹೀಗಾಗಿ ಜೈನ ಧರ್ಮವು ಕನ್ನಡ ನಾಡಿನ ಇತಿಹಾಸದೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿದೆ.

ಜೈನ ಧರ್ಮವನ್ನು ರಾಜ್ಯಧರ್ಮವನ್ನಾಗಿ ಮಾಡಿಕೊಂಡು ಇದಕ್ಕೆ ಆಶ್ರಯ-ಪ್ರೋತ್ಸಾಹ ನೀಡಿ ಪೋಷಿಸಿಕೊಂಡು ಬಂದ ಅರಸು, ಮಹಾಮಂಡಳೇಶ್ವರ ಮತ್ತು ಸಾಮಂತ ಮನೆತನಗಳ ಪತನದ ತರುವಾಯ ಇದಕ್ಕೆ ಮುಂಚೆ ದೊರೆಯುತ್ತಿದ್ದಂತಹ ಪ್ರಭುವರ್ಗದ ಬಲ, ಉತ್ತೇಜನ, ಆಶ್ರಯ-ಪ್ರೋತ್ಸಾಹಗಳು ಕ್ರಿ. ಶ. ಸುಮಾರು ೧೧ನೆಯ ಶತಮಾನದಿಂದೀಚೆಗೆ ಇಳಿಮುಖವಾಗುತ್ತ ಮುಂದುವರೆದು ಇದರ ಬೇರುಗಳು ಸಡಿಲುಗೊಳ್ಳಲಾರಂಭಿಸಿದವು. ಹಾಗೆಯೇ ಆ ಕಾಲಘಟ್ಟದಲ್ಲಿ ಪ್ರಾಮುಖ್ಯತೆಗೆ ಬಂದ ಶೈವ ಮತ್ತು ವೈಷ್ಣವ ಧರ್ಮಗಳ ವಿವಿಧ ಪಂಥಗಳು ಮತ್ತು ಕೆಲವು ಅರಸು ಮನೆತನಗಳು ಜೈನ ಧರ್ಮದ ಮೇಲೆ ಆಕ್ರಮಣಗಳನ್ನು ಪ್ರಾರಂಭಿಸಿದವು. ಸಮಕಾಲೀನ ಶೈವ, ಬೌದ್ಧ, ಜೈನ, ವೈಷ್ಣವ ಇತ್ಯಾದಿ ಧರ್ಮಗಳಲ್ಲಿ ಪರಸ್ಪರ ನಡೆಯುತ್ತಿದ್ದ ಆಂತರಿಕ ಮತ್ತು ಬಾಹ್ಯ ಘರ್ಷಣೆಗಳನ್ನು ತಪ್ಪಿಸಲು ಅಂದಿನ ರಾಜ-ಮಹಾರಾಜರು ಪರಸ್ಪರರಲ್ಲಿ ಸಮನ್ವತೆಯನ್ನು ಸಾಧಿಸುವ ನೀತಿಯನ್ನು ಅನುಸರಿಸಿ ತಮ್ಮನ್ನು 'ಚತುಸ್ಸಮಯ ಸಮುದ್ಧರಣರ್' (ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಧರ್ಮಗಳ ಪಾಲಕರು) ಎಂದು ಕರೆದುಕೊಂಡು ಸಮಕಾಲೀನ ಪ್ರತಿಯೊಂದು ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳಿಗೆ ಉದಾರವಾಗಿ ದಾನ-ದತ್ತಿಗಳನ್ನು ಕೊಡುತ್ತಿದ್ದರು. ಆದರೂ ಒಂದು ಧರ್ಮೀಯರು ತಮ್ಮ ಧರ್ಮದ ಶ್ರೇಷ್ಠತೆಯನ್ನು ದೃಢೀಕರಿಸಲು ಹಾಗೂ ತಮ್ಮ ಧರ್ಮವನ್ನು ಒಂದು ಪ್ರಾಪಂಚಿಕ ಶಕ್ತಿಯಾಗಿ ಬೆಳೆಸುವುದರಗೊಸ್ಕರ ಮತ್ತು ತಮ್ಮ ವಲಯವನ್ನು ವಿಸ್ತರಿಸಿಕೊಳ್ಳಲು ಪರಧರ್ಮೀಯರನ್ನು ತಮ್ಮ ವಲಯಕ್ಕೆ ಮತಾಂತರಿಸಿಕೊಂಡು ತಾವು ಸಬಲಗೊಳ್ಳುವುದರಲ್ಲಿ ಮತ್ತು ತಮ್ಮ ವಲಯಕ್ಕೆ ಬರದೇ ಹೊರಗುಳಿದ ಸಮೂಹಗಳಲ್ಲಿ ತಮ್ಮ ಸಂಸ್ಕೃತಿಯನ್ನು ಬೆರೆಯಿಸಿ ಅವರ ಸ್ಮಾರಕಗಳನ್ನು ನಾಶಮಾಡಿ ಇಲ್ಲವೇ ಅತಿಕ್ರಮಿಸಿ ತಮ್ಮ ಧರ್ಮದ ದೇವಾಲಯಗಳನ್ನಾಗಿ ಪರಿವರ್ತಿಸಿಕೊಂಡು ಅವರನ್ನು ದುರ್ಬಲಗೊಳಿಸುವ ನಿಟ್ಟಿನಲ್ಲಿ ನಿರತವಾಗುತ್ತ ಮುನ್ನಡೆದಾಗ ಪರಸ್ಪರರಲ್ಲಿ ಘರ್ಷಣೆಗಳು ಸಂಭವಿಸುತ್ತಲೇ ನಡೆದವು.[7]

ಒಟ್ಟಾರೆ ಯಾವುದೋ ಒಂದು ಮೂಲದಿಂದ ತಮ್ಮ ಮತ್ತು ಬಸದಿಗಳ ಮೇಲೆ ಪರಧರ್ಮೀಯರು ನಡೆಸುತ್ತಿದ್ದ ಆಕ್ರಮಣಗಳಿಗೆ ಪ್ರತಿಯಾಗಿ ಜೈನ ಧರ್ಮೀಯರು ಉಗ್ರತೆಗಾಗಲೀ, ಪ್ರತೀಕಾರಕ್ಕಾಗಲೀ, ದೇವಾಲಯಗಳ ನಾಶಕ್ಕಾಗಲೀ, ಅವುಗಳನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಲೀ ತೊಡಗಲಿಲ್ಲ. ಬದಲಾಗಿ ಆಕ್ರಮಣಗಳಿಗೊಳಗಾಗಿ ಭಗ್ನವಾದ ಬಸದಿಗಳ ಜೀರ್ಣೋದ್ಧಾರ ಮತ್ತು ಇಳಿಮುಖದೆಡೆಗೆ ನಡೆದಿದ್ದ ತಮ್ಮ ಧರ್ಮದ ಪುನುರುಜ್ಜೀವನ ಕೈಗೊಳ್ಳುವ ಚಟುವಟಿಕೆಗಳೆಡೆಗೆ ಗಮನ ಹರಿಸಿದರು. ಇಂತಹ ಚಟುವಟಿಕೆಗಳನ್ನು ಕೈಗೊಂಡವರಲ್ಲಿ ಗಂಗ ಮನೆತನದ ರಾಚಮಲ್ಲನ ಮಂತ್ರಿ ಚಾವುಂಡರಾಯ, ಹೊಯ್ಸಳ ಮನೆತನದ ವಿಷ್ಣುವರ್ಧನನ ಮಂತ್ರಿ ಗಂಗರಾಜ ಮತ್ತು ವಿಜಯ ನರಸಿಂಹನ ದಂಡನಾಯಕ ಹುಳ್ಳ, ಮರಿಯಾನೆ ದಂಡನಾಯಕನ ಸಹೋದರ ದಂಡನಾಯಕ ಭರತಮಯ್ಯ, ಕಲ್ಯಾಣದ ಚಾಳುಕ್ಯ ಮನೆತನದ ಮಹಾಸಾಮಂತ ಗೋವೆಯ ಕಾದಂಬ ಮನೆತನದ ಜಯಕೇಸಿಗೆ (ಕ್ರಿ. ಶ. ೧೧೦೪-೧೧೪೭) ರಾಜ್ಯನಿರ್ವಹಣೆಯಲ್ಲಿ ಬೆಂಗಾವಲಾಗಿ ನಿಂತು ಕೆಲವು ಕಾಲ ಸ್ವತಂತ್ರವಾಗಿಯೂ ಆಳ್ವಿಕೆಯನ್ನು ಕೈಗೊಂಡಿದ್ದ ಆತನ ಪಟ್ಟದರಸಿ ಮೈಳಲದೇವಿಯ ಸಾಮಂತ ಭಾವನ ಗಂಧವಾರಣ, ಕೊಪ್ಪಳದ ಕವಡೆಯ ಬೊಪ್ಪಸೆಟ್ಟಿ, ಮೈಳಾಪಾನ್ವಯ ಕಾರೆಯಗಣ ಪರಂಪರೆಯ ಕೇಮಣ ಮತ್ತು ರೇಚಣ ಮೊದಲಾದ ದಾನಶೂರರು, ಸಮಾಜ ಸೇವಕರು, ಆಶ್ರಯದಾತರು, ವರ್ತಕರು, ಅಧಿಕಾರಿಗಳು, ದಂಡನಾಯಕರು, ಶ್ರಾವಕರು ಪ್ರಮುಖರಾಗಿದ್ದಾರೆ. ಆದರೂ ಜೈನ ಧರ್ಮೀಯರ ಮೇಲೆ ಪರಧರ್ಮೀಯರ

ಆಕ್ರಮಣಗಳು ಜರುಗುತ್ತಲೇ ನಡೆದವು. ಇದರಿಂದಾಗಿ ಜೈನ ಧರ್ಮೀಯರು ತಮ್ಮ ಅಸ್ತಿತ್ವಕ್ಕಾಗಿ, ತಮ್ಮ ಧರ್ಮದ ಮತ್ತು ಜಿನಾಲಯಗಳ ರಕ್ಷಣೆಗಾಗಿ ಶೈವ ಮತ್ತು ವೈಷ್ಣವ ಧರ್ಮೀಯರೊಂದಿಗೆ ಹೊಂದಾಣಿಕೆ-ಒಡಂಬಡಿಕೆ ಮಾಡಿಕೊಂಡು ಅವರ ಅನುಗ್ರಹ ಪಡೆಯುವುದು ಅನಿವಾರ್ಯವಾಯಿತು.[8]

ಸಮಕಾಲೀನ ಜೈನ ಮುನಿಗಳು ಮತ್ತು ಕವಿಗಳು ಜೈನ ಧರ್ಮದ ಹಿನ್ನೆಲೆ, ಶ್ರೇಷ್ಠತೆ, ಅಹಿಂಸಾತತ್ವ, ತೀರ್ಥಂಕರರು ಮತ್ತು ಆದರ್ಶ ವ್ಯಕ್ತಿಗಳ ಜೀವನ ಚರಿತ್ರೆಗೆ ಸಂಬಂಧಿಸಿದಂತೆ ಜನಸಾಮಾನ್ಯರಿಗೆ ಅರ್ಥವಾಗುವಂತೆ ಪ್ರಾದೇಶಿಕ ಸರಳ ಭಾಷೆ ಮತ್ತು ಶೈಲಿಯನ್ನು ಉಪಯೋಗಿಸಿಕೊಂಡು ಬೃಹತ್ ಸಂಖ್ಯೆಯಲ್ಲಿ ಧಾರ್ಮಿಕ ಕೃತಿಗಳನ್ನು ರಚಿಸಿದರು. ಇವುಗಳ ಮುಖಾಂತರ ಸಾಮಾನ್ಯ ವ್ಯಕ್ತಿಯೂ ಅಹಿಂಸೆ, ಸತ್ಯ, ಆಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ಎಂಬ ಪಂಚಾಣುವ್ರತಗಳ ಪಾಲನೆಯಿಂದ ಸಂಸಾರ ಪರಿಭ್ರಮಣ ಚಕ್ರದಿಂದ ಮುಕ್ತಿ ಪಡೆದು ಮೋಕ್ಷವನ್ನು ಸಂಪಾದಿಸಬಲ್ಲ ಎಂಬುದನ್ನು ಪ್ರತಿಪಾದಿಸಿದರು. ಜೊತೆಗೆ ದೇವರೆಲ್ಲರೂ ಒಂದೇ ಅವರವರು ಭಾವಿಸಿದಂತೆ ಆತನ ಸ್ವರೂಪ ಎಂದು ಸಮನ್ವಯ ನೀತಿಯನ್ನು ಬೋಧಿಸುವುದರ ಮೂಲಕ ಜೈನ ಧರ್ಮದತ್ತ ಜನಸಾಮಾನ್ಯರನ್ನು ಆಕರ್ಷಿಸಿದರು. ಹಾಗೆಯೇ ಇಳಿಮುಖದೆಡೆಗೆ ನಡೆದಿದ್ದ ಜೈನ ಧರ್ಮದ ಪ್ರಭಾವನೆಯನ್ನು ಕೈಗೊಂಡು ಕ್ರಿ. ಶ. ಸುಮಾರು ೧೫ನೆಯ ಶತಮಾನದ ಸುಮಾರಿಗೆ _

ಜಿನಧರ್ಮ್ಮಾವಾಸಮಾದತ್ತಮಳ ವಿನಯದಾಗಾರಮಾದತ್ತು
ಪದ್ಮಾಸನನಿರ್ಪ್ಪಾ ಸದ್ಮಮಾದತ್ತತಿ ವಿಶದ ಯಶೋಧಾಮಮಾದತ್ತು
ವಿದ್ಯಾಧನಜನ್ಮಸ್ಥಾನಮಾದತ್ತ ಸಮತರಳ ಗಂಭೀರ ಸದ್ಗೇಹಮಾದ
ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರುಕರ್ಣ್ಣಾಟದೇಶಂ ||

ವಿನಯಕ್ಕೆ ಆಗರವಾದ, ಬ್ರಹ್ಮನ ಮನೆಯಾದ, ವಿದ್ಯೆಯ ನಿಧಿಗೆ ಜನ್ಮಸ್ಥಾನವಾದ, ಸಾಟಿಯಿಲ್ಲದ ಹೊಳೆಯುವ ಗಂಭೀರ ಶ್ರೇಷ್ಠ ಗೃಹವಾದ, ಅನೇಕ ಮಹಿಮೆಗಳಿಂದ ಕೂಡಿ ಕಂಗೊಳಿಸುತ್ತಿದ್ದ ಕನ್ನಡ ನಾಡನ್ನು ಜೈನ ಧರ್ಮದ ಆವಾಸಸ್ಥಾನವನ್ನಾಗಿಸಿದರು.[9]

ಹೀಗೆ ಕನ್ನಡ ನಾಡಿನಲ್ಲಿ ಅತೀ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ಜೈನ ಧರ್ಮವು ಈ ನಾಡಿನ ಸಂಸ್ಕೃತಿಯೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದು ಇದರ ಇತಿಹಾಸ, ಸಂಸ್ಕೃತಿ, ಸಾಹಿತ್ಯ, ವಾಸ್ತುಕಲೆ, ಶಿಲ್ಪಕಲೆ, ಚಿತ್ರಕಲೆ ಮೊದಲಾದ ಕ್ಷೇತ್ರಗಳನ್ನು ಶ್ರೀಮಂತಗೊಳಿಸಿದೆ. ಕ್ರಿ. ಶ. ಸುಮಾರು ೧೧ನೆಯ ಶತಮಾನದಿಂದೀಚೆಗೆ ಸಮಕಾಲೀನ ಧರ್ಮಗಳು ಜೈನ ಧರ್ಮವನ್ನು ಮೂಲೋತ್ಪಾಟನೆಗೊಳಿಸಲು ವಿವಿಧ ಬಗೆಗಳಲ್ಲಿ ಪ್ರಯತ್ನಿಸಿದರೂ ಇದರ ಗಟ್ಟಿಯಾದ ತತ್ವ-ಸಿದ್ಧಾಂತಗಳು, ಆಚಾರ-ವಿಚಾರಗಳಿಂದ ಇದು ಇಂದಿಗೂ ಪ್ರಪಂಚದಲ್ಲಿ ಮಾದರಿ ಧರ್ಮವಾಗಿ ಉಳಿದು ಬರಲು ಸಾಧ್ಯವಾಗಿದೆ.

### ೩. ಗೋಕಾಕ ತಾಲೂಕಿನಲ್ಲಿ ಜೈನ ಧರ್ಮಕ್ಕೆ ರಾಜಾಶ್ರಯ

ಬೆಳಗಾವಿ ಜಿಲ್ಲೆಯ ಪ್ರದೇಶದಲ್ಲಿ ಜೈನ ಧರ್ಮಕ್ಕೆ ರಾಜಾಶ್ರಯ ನೀಡಿದ ಅರಸು ಮನೆತನಗಳಲ್ಲಿ ಬನವಾಸಿ ಕದಂಬರು, ತಲಕಾಡಿನ ಗಂಗರು, ಬಾದಾಮಿ ಚಲುಕ್ಯರು, ಸೇಂದ್ರಕರು, ಮಳಖೇಡದ ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಸವದತ್ತಿ ರಟ್ಟರು, ಗೋವೆಯ ಕಾದಂಬರು, ದೋರಸಮುದ್ರದ ಹೊಯ್ಸಳರು, ಕೊಲ್ಲಾಪುರದ ಶಿಲಾಹಾರರು ಪ್ರಮುಖರಾಗಿದ್ದಾರೆ. ಈ ಜಿಲ್ಲೆಯ ಗೋಕಾಕ ತಾಲೂಕು ಇತಿಹಾಸಪೂರ್ವ ಕಾಲದಿಂದಲೂ ವಿವಿಧ ಶಿಲಾಯುಗಗಳ ಮಾನವನ ಸಾಂಸ್ಕೃತಿಕ ಚಟುವಟಿಕೆಗಳ ನೆಲೆವೀಡು.[10] ಇದು ಕುಂತಳನಾಡು, ಪಲಸಿಗೆ-೧೨೦೦೦,

ಕುಹೂಂಡಿ-೩೦೦೦, ಕುಂದರಗಿ ಕಂಪಣ, ಕುರುಂಬೆಟ್ಟ ಕಂಪಣ, ಅಂಕಲೆ ಪರಗಣ ಎಂದಿತ್ಯಾದಿ ಆಡಳಿತ ಪ್ರಾಂತಗಳನ್ನು ಕೇಂದ್ರವಾಗಿಟ್ಟುಕೊಂಡು ಆಳಿದ ಅರಸರು, ಮಹಾಮಂಡಳೇಶ್ವರರು ಮತ್ತು ಗಾವುಂಡ ಮನೆತನಗಳ ಅಧೀನಕ್ಕೆ ಒಳಪಟ್ಟಿತ್ತು. ಆ ಮನೆತನಗಳ ರಾಜಕೀಯ ಹಿನ್ನೆಲೆಯ ಜೊತೆಗೆ ಗೋಕಾಕ ತಾಲೂಕಿನಲ್ಲಿ ದೊರೆತ ಪ್ರಾಚ್ಯಾವಶೇಷಗಳನ್ನು, ಸಾಹಿತ್ಯಿಕ ಆಕರಗಳನ್ನು ಮತ್ತು ಸಂದರ್ಭಾನುಸಾರವಾಗಿ ಇತರೆಡೆಯ ಕುರುಹುಗಳನ್ನು ಪೂರಕವಾಗಿಟ್ಟುಕೊಂಡು ಆ ಮನೆತನಗಳ ಸಂಕ್ಷಿಪ್ತ ರಾಜಕೀಯ ಹಿನ್ನೆಲೆಯನ್ನು ಗಮನಿಸಲಾಗಿದೆ. ಆ ಮನೆತನಗಳು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಜೈನ ಧರ್ಮಕ್ಕೆ ಕೊಡಮಾಡಿದ ಆಶ್ರಯ-ಪ್ರೋತ್ಸಾಹ ಮತ್ತು ಕೈಗೊಂಡಿರುವ ಜೈನ ಸಾಂಸ್ಕೃತಿಕ ಚಟುವಟಿಕೆಗಳು ಈ ಕೆಳಗಿನಂತಿವೆ.

**೩.೧. ನಂದರು, ಮೌರ್ಯರು ಮತ್ತು ಶಾತವಾಹನರು**

ಕುಂತಳನಾಡು ಎಂದು ಕರೆಯಲ್ಪಡುತ್ತಿದ್ದ ಕನ್ನಡ ನಾಡಿನ ಉತ್ತರ ಭಾಗವು ನಂದರ ಆಳ್ವಿಕೆಗೆ ಒಳಪಟ್ಟಿತ್ತು.[11] ಅವರ ತರುವಾಯ ಈ ನಾಡಿನ ಬಹುತೇಕ ಪ್ರದೇಶಗಳು ಮೌರ್ಯರ ಆಳ್ವಿಕೆಯ ಪ್ರಭಾವಕ್ಕೆ ಒಳಪಟ್ಟಿರುವುದಕ್ಕೆ ಸಾಹಿತ್ಯಿಕ ಮತ್ತು ಶಾಸನಾಧಾರಗಳಿವೆ.[12] ಶಾತವಾಹನರ ಆಳ್ವಿಕೆಗೆ (ಕ್ರಿ. ಪೂ. ೨೨೦ - ಕ್ರಿ. ಶ. ೨೩೦) ಬೆಳಗಾವಿ ಜಿಲ್ಲೆಯು ಒಳಪಟ್ಟಿತ್ತು.[13] ನಂದರು ಮತ್ತು ಶಾತವಾಹನ ಮನೆತನಗಳು ಕನ್ನಡ ನಾಡಿನಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಿರಬಹುದಾದರೂ ಅವುಗಳಿಗೆ ಸಂಬಂಧಿಸಿದ ಯಾವುದೇ ಬಗೆಯ ಕುರುಹುಗಳು ಈ ವರೆಗೆ ಬೆಳಕಿಗೆ ಬಂದಿಲ್ಲ. ಕ್ರಿ. ಪೂ. ಸುಮಾರು ೩ನೆಯ ಶತಮಾನದಲ್ಲಿ ಉತ್ತರಾಪಥದಿಂದ ದಕ್ಷಿಣಾಪಥಕ್ಕೆ ಆಗಮಿಸಿದ ಅಂತಿಮ ಶ್ರುತಕೇವಲಿ ಭದ್ರಬಾಹು ಭಟ್ಟಾರಕರ ಜೊತೆಯಲ್ಲಿ ಮೌರ್ಯ ಮನೆತನದ ಚಂದ್ರಗುಪ್ತನು ಆಗಮಿಸಿದನೆಂದು ಕೆಲವು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಆತನು ಜಿನ ದಿಕ್ಷೆಯನ್ನು ಸ್ವೀಕರಿಸಿ ಪ್ರಭಾಚಂದ್ರಾಚಾರ್ಯ ಎಂಬ ಹೆಸರಿನಿಂದ ತನ್ನ ಜೀವಿತದ ಕೊನೆಯವರೆಗೂ ಭದ್ರಬಾಹು ಭಟ್ಟಾರಕರ ಜೊತೆಯಲ್ಲಿದ್ದು ಅವರು ಸಮಾಧಿಮರಣವನ್ನಪ್ಪಿದ ತರುವಾಯ ಅವರ ಪಾದ ನಿಷಿಧಿಗೆಗಳನ್ನು ಆರಾಧಿಸುತ್ತ ತಾನೂ ಸಹ ಸಮಾಧಿಮರಣವನ್ನಪ್ಪಿದನು. ಇದನ್ನು ಶ್ರವಣಬೆಳಗೊಳದ ಕೆಲವು ಶಾಸನಗಳು, ಚಂದ್ರಗಿರಿ ಬೆಟ್ಟ, ಚಂದ್ರಗುಪ್ತ ಬಸದಿ ಮತ್ತು ಈ ಬಸದಿಯ ಸಭಾಮಂಟಪದ ಭಿತ್ತಿಯ ಜಾಲಂಧ್ರದಲ್ಲಿ ಅಳವಡಿಸಲಾಗಿರುವ ಕಥಾನಿರೂಪಣ ಶಿಲ್ಪಗಳು ಹಾಗೂ ಹರಿಷೇಣಾಚಾರ್ಯನ ಬೃಹತ್ಕಥಾಕೋಶ, ರತ್ನನಂದಿಯ ಭದ್ರಬಾಹು ಚರಿತೆ, ಭ್ರಾಜಿಷ್ಣುವಿನ ಆರಾಧನ ಕರ್ಣಾಟಟೀಕಾ, ಚಿದಾನಂದ ಕವಿಯ ಮುನಿವಂಶಾಭ್ಯುದಯ, ದೇವಚಂದ್ರನ ರಾಜಾವಳಿ ಕಥಾಸಾರ, ಗ್ರೀಕ್ ದೇಶದ ಮೇಗಾಸ್ತನೀಸನ ಇಂಡಿಕಾ ಮೊದಲಾದ ಕೆಲವು ಕೃತಿಗಳಲ್ಲಿರುವ ಪ್ರಸ್ತಾಪಗಳು ಪರೋಕ್ಷವಾಗಿ ದೃಢಪಡಿಸುತ್ತವೆ. ಚಂದ್ರಗುಪ್ತನ ಮೊಮ್ಮಗ ಅಶೋಕ ಚಕ್ರವರ್ತಿಯೂ ಶ್ರವಣಬೆಳಗೊಳಕ್ಕೆ ಭೇಟಿ ನೀಡಿದನೆಂದೂ ಈ ಪ್ರದೇಶಕ್ಕೆ ಧರ್ಮಪ್ರಸಾರಕರನ್ನು ಕಳುಹಿಸಿದನೆಂದೂ ಐತಿಹ್ಯವಿದೆ.[14] ಆದರೆ ಗೋಕಾಕ ತಾಲೂಕಿನಲ್ಲಿ ಮೌರ್ಯರ ಕಾಲಕ್ಕೆ ಸಂಬಂಧಿಸಿದ ಯಾವುದೇ ಜೈನ ಕುರುಹುಗಳು ಇದುವರೆಗೆ ಬೆಳಕಿಗೆ ಬಂದಿಲ್ಲ.

**೩.೨. ಬನವಾಸಿ ಕದಂಬರು ಮತ್ತು ಬಾದಾಮಿ ಚಲುಕ್ಯರು**

ಶಾತವಾಹನರ ತರುವಾಯ ಬನವಾಸಿ-೧೨೦೦೦ ಪ್ರದೇಶದಲ್ಲಿ ಆಳ್ವಿಕೆ ಕೈಗೊಂಡಿದ್ದ ಕದಂಬರು (ಕ್ರಿ.ಶ. ೩೨೫-೫೩೫) ಮೂಲತಃ ವೈದಿಕ ಮತಾವಲಂಬಿಗಳಾಗಿದ್ದರೂ ತಮ್ಮ ಜೈನ ಅಧಿಕಾರಿಗಳ ವಿಜ್ಞಾಪನೆ

ಮೇರೆಗೆ ಬಸದಿ ಮತ್ತು ಜೈನ ಮುನಿಗಳಿಗೆ ದಾನ-ದತ್ತಿಗಳನ್ನು ಕೊಡಮಾಡಿದುದರ ಜೊತೆಗೆ ತೀರ್ಥಂಕರರ ಪೂಜೆಯನ್ನು ಸಾರ್ವಜನಿಕವಾಗಿ ವಿಜೃಂಭನೆಯಿಂದ ನಡೆಸಬೇಕೆಂಬುದನ್ನು ಹಾಗೂ ಜೈನ ಧರ್ಮದ ಶ್ರೇಷ್ಠತೆಯನ್ನು ಮುಕ್ತ ಕಂಠದಿಂದ ಹೊಗಳಿದುದನ್ನು ಆ ಕಾಲದ ಕೆಲವು ಶಾಸನಗಳು ಬಣ್ಣಿಸುತ್ತವೆ. ಅವರ ಈ ಉದಾರತೆಯಿಂದಾಗಿ ಬೆಳಗಾವಿ ಜಿಲ್ಲೆಯ ಹಲಸಿ ಗ್ರಾಮದಲ್ಲಿಯೂ ಬಸದಿಗಳು ನಿರ್ಮಾಣವಾಗಿದ್ದವು.[15] ಗೋಕಾಕ ತಾಲೂಕಿನ ಗೋಕಾಕ ಜಲಪಾತದ ಕ್ರಿ. ಶ. ಸುಮಾರು ೬ನೆಯ ಶತಮಾನದ ಶಾಸನವು ಕದಂಬ ಮನೆತನದ ದಾಮೋದರನ ಆಳ್ವಿಕೆಯನ್ನು ಉಲ್ಲೇಖಿಸಿದೆ.[16] ಈತನ ಹೆಸರು ಕದಂಬ ಮನೆತನದ ಬೇರೆ ಯಾವುದೇ ಶಾಸನಗಳಲ್ಲಿ ಗೋಚರಿಸುವುದಿಲ್ಲ. ಪ್ರಾಯಶಃ ಈ ಅರಸನು ಕದಂಬ ಮನೆತನದ ಕೊನೆಗಾಲದ ಅರಸನಾಗಿರಬಹುದು. ಕದಂಬ ಮನೆತನದ ಅವನತಿಯ ತರುವಾಯ ಈ ದಾಮೋದರ ಅರಸನು ತನ್ನ ಪರಿವಾರದೊಂದಿಗೆ ಇಂದಿನ ಗೋಕಾಕ ತಾಲೂಕಿನ ಪ್ರದೇಶಕ್ಕೆ ಬಂದು ನೆಲೆಸಿರಬಹುದು. ಈ ಅರಸನು ತನ್ನ ಪೂರ್ವಜರಂತೆ ಜೈನ ಧರ್ಮಕ್ಕೆ ಆಶ್ರಯ-ಪ್ರೋತ್ಸಾಹ ನೀಡಿರಬಹುದಾದರೂ ಅವುಗಳಿಗೆ ಸಂಬಂಧಿಸಿದಂತೆ ಯಾವುದೇ ಬಗೆಯ ಕುರುಹುಗಳು ಗೋಕಾಕ ತಾಲೂಕಿನಲ್ಲಿ ಈ ವರೆಗೆ ಬೆಳಕಿಗೆ ಬಂದಿಲ್ಲ.

ಕದಂಬರ ತರುವಾಯ ರಾಜಕೀಯ ರಂಗವನ್ನು ಪ್ರವೇಶಿಸಿದ ಬಾದಾಮಿ ಚಲುಕ್ಯರು (ಕ್ರಿ.ಶ. ೫೪೦-೭೫೭) ಬಾದಾಮಿ, ಐಹೊಳೆ, ಪಟ್ಟದಕಲ್ಲು, ಲಕ್ಷ್ಮೇಶ್ವರ, ಅಣ್ಣಿಗೇರಿ, ಗುಡಗೇರಿಗಳಲ್ಲಿ ಜೈನ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಿರುವಂತೆ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಹೂಲಿ ಮುಂತಾದೆಡೆಗಳಲ್ಲಿಯೂ ಜೈನ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಿದ್ದಾರೆ.[17] ಗೋಕಾಕ ತಾಲೂಕಿನಲ್ಲಿ ಬಾದಾಮಿ ಚಲುಕ್ಯ ಮನೆತನವು ಆಳ್ವಿಕೆ ಕೈಗೊಂಡಿದ್ದ ಶಾಸನ ಕುರುಹುಗಳಿವೆ.[18] ಆ ಮನೆತನವು ಇಲ್ಲಿ ಜೈನ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಿರಬಹುದಾದರೂ ಅವುಗಳಿಗೆ ಸಂಬಂಧಿಸಿದ ಯಾವುದೇ ಬಗೆಯ ಕುರುಹುಗಳು ಈ ವರೆಗೆ ಉಪಲಬ್ಧವಾಗಿಲ್ಲ.

### ೩.೩. ಗಂಗರು, ಭೋಜರು ಮತ್ತು ಸೇಂದ್ರಕರು

ಬೆಳಗಾವಿ ಜಿಲ್ಲೆಯ ಪ್ರದೇಶದಲ್ಲಿ ತಲಕಾಡಿನ ಗಂಗರು, ಭೋಜರು ಮತ್ತು ಸೇಂದ್ರಕರು ಆಳ್ವಿಕೆ ಮಾಡಿದ ಶಾಸನ ಕುರುಹುಗಳು ದೊರೆತಿವೆ. ಇವರು ಪ್ರಸ್ತುತ ಜಿಲ್ಲೆಯ ಕೆಲವೆಡೆಗಳಲ್ಲಿ (ಬೈಲಹೊಂಗಲ, ಬೆಳಗಾವಿ, ಖಾನಾಪುರ, ಸವದತ್ತಿ ತಾಲೂಕುಗಳ ಪರಿಸರ) ಬಸದಿಗಳ ನಿರ್ಮಾಣಕ್ಕೆ ಪ್ರೋತ್ಸಾಹಿಸಿ ದಾನ-ದತ್ತಿಗಳನ್ನು ಕೊಡಮಾಡಿದ್ದಾರೆ.[19] ಆದರೆ ಆ ಮೂರೂ ಮನೆತನಗಳಿಗೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಗೋಕಾಕ ತಾಲೂಕಿನಲ್ಲಿ ಇದುವರೆಗೆ ಬೆಳಕಿಗೆ ಬಂದಿಲ್ಲ.

### ೩.೪. ಮಳಖೇಡದ ರಾಷ್ಟ್ರಕೂಟರು

ಒಂದು ಕಾಲಘಟ್ಟದಲ್ಲಿ ಇಂದಿನ ಕಾವೇರಿ ನದಿಯಿಂದ ಗೋದಾವರಿ ನದಿಯವರೆಗೆ ವಿಶಾಲವಾಗಿದ್ದ ಕನ್ನಡ ನಾಡಿನ ಭೂಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿದ ಮಳಖೇಡದ ರಾಷ್ಟ್ರಕೂಟರ (ಕ್ರಿ.ಶ ೭೫೭-೯೭೩) ಜೈನ ಶಾಸನಗಳು ಗೋಕಾಕ ತಾಲೂಕಿನಲ್ಲಿ ಕಂಡುಬಂದಿವೆ. ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನವು ರಾಷ್ಟ್ರಕೂಟ ಮನೆತನದ ಅತೀ ಪ್ರಾಚೀನ ಅರಸ ದೇಜ್ಜಮಹಾರಾಜನ ಪುತ್ರ ಇಂದ್ರನಂದಾದಿ

ರಾಜನು ತನ್ನ ಹಾಗೂ ತನ್ನ ಪೂರ್ವಜರ ಪುಣ್ಯಗೋಸ್ಕರ ಕಷ್ಮಾಂಡಿ ವಿಷಯದಲ್ಲಿದ್ದ ಜಳಾರ ಗ್ರಾಮದಲ್ಲಿ ಅರಹಂತ ತೀರ್ಥಂಕರನ ಪೂಜೆ, ಶಿಕ್ಷಕರು, ರೋಗಿಗಳು, ವೃದ್ಧರು ಮತ್ತು ತಪಸ್ವಿಗಳ ಉಪಯೋಗಕ್ಕಾಗಿ ಜಂಬೂಖಂಡಗಣ ಪರಂಪರೆಯ ಆರ್ಯನಂದಿ ಆಚಾರ್ಯನ ಸನ್ನಿಧಿಯಲ್ಲಿ ಐವತ್ತು ನಿರ್ವತನ ಭೂಮಿಯನ್ನು ದಾನ ಮಾಡಿದನೆಂದು ಉಲ್ಲೇಖಿಸಿದೆ.[20] ರಾಷ್ಟ್ರಕೂಟ ಮನೆತನದ ಇನ್ನಿತರ ಅರಸರು ಮತ್ತು ಅವರ ಮಹಾಮಂಡಳೇಶ್ವರರಾದ ಬಂಕಾಪುರದ ಚೆಲ್ಲಕೇತನರು ಕೊಣ್ಣೂರು, ರಾಣೇಬೆನ್ನೂರು, ಮುಳಗುಂದ, ನರೇಗಲ್ಲ, ಅಸುಂಡಿ, ಲೋಕಾಪುರ, ಪಟ್ಟದಕಲ್ಲು, ಹಳ್ಳೂರು, ಬಂಕಾಪುರ ಮೊದಲಾದೆಡೆಗಳಲ್ಲಿ ಜೈನ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಂತೆ ಗೋಕಾಕ ತಾಲೂಕಿನಲ್ಲಿ ಕೈಗೊಂಡಿರಬಹುದಾದರೂ ಅವುಗಳಿಗೆ ಸಂಬಂಧಿಸಿದ ಕುರುಹುಗಳು ಈ ವರೆಗೆ ಲಭ್ಯವಾಗಿಲ್ಲ.

**೩.೫. ಕಲ್ಯಾಣದ ಚಾಳುಕ್ಯರು**

ರಾಷ್ಟ್ರಕೂಟರ ತರುವಾಯ ಕಲ್ಯಾಣದಿಂದ ಆಳ್ವಿಕೆ ಪ್ರಾರಂಭಿಸಿದ ಚಾಳುಕ್ಯರು (ಕ್ರಿ.ಶ. ೯೭೩-೧೧೯೮) ಮತ್ತು ಅವರ ಅಧೀನರಾಗಿ ವಿವಿಧ ಭಾಗಗಳಲ್ಲಿ ಆಳ್ವಿಕೆ ಕೈಗೊಂಡಿದ್ದ ಸವದತ್ತಿ ರಟ್ಟರು, ಹಾನಗಲ್ಲ ಕಾದಂಬರು, ಗೋವೆ ಕಾದಂಬರು ಮೊದಲಾದ ಮಹಾಮಂಡಳೇಶ್ವರರು ಜೈನ ಧರ್ಮಕ್ಕೆ ಹಾಗೂ ಜೈನ ಕವಿಗಳಿಗೆ ಉದಾರವಾಗಿ ಆಶ್ರಯ-ಪ್ರೋತ್ಸಾಹ ಮತ್ತು ದಾನ-ದತ್ತಿಗಳನ್ನು ಕೊಡಮಾಡಿ ಅಸಂಖ್ಯಾತ ಬಸದಿಗಳ ನಿರ್ಮಾಣಕ್ಕೆ ಮತ್ತು ಜೈನ ಸಾಹಿತ್ಯದ ಅಭಿವೃದ್ಧಿಗೆ ಕಾರಣರಾದರು.[21] ಈ ಮನೆತನದ ೬ನೆಯ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದಲ್ಲಿ ಆತನ ಪುತ್ರ ಜಯಕರ್ಣನು ಕುಹೂಂಡಿ ನಾಡಿನ ಆಳ್ವಿಕೆಯನ್ನು ನೋಡಿಕೊಳ್ಳುತ್ತಿದ್ದನು. ಈತನು ಮಹಾಪ್ರಭು ನಿಧಿಯಮ ಗಾವುಂಡನು ಕೊಣ್ಣೂರಿನಲ್ಲಿ ನಿರ್ಮಿಸಿದ್ದ ಬಸದಿಯ ಭೋಗಕ್ಕೆ, ಮುನಿಗಳ ಆಹಾರ ದಾನಕ್ಕೆ ಆ ಬಸದಿಯ ಸ್ಥಾನಾಚಾರ್ಯ ವಾಸುಪೂಜ್ಯ ಮುನಿಯ ಪಾದಗಳನ್ನು ತೊಳೆದು ಎರಡು ಗದ್ಯಾಣ ನಾಣ್ಯವನ್ನು ದಾನ ಮಾಡಿದ್ದಾನೆ.[22] ಕಲ್ಯಾಣದ ಚಾಳುಕ್ಯ ಮನೆತನದ ತರುವಾಯದ ಅರಸರು ಗೋಕಾಕ ತಾಲೂಕಿನಲ್ಲಿ ಜೈನ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಿದ್ದ ಕುರುಹುಗಳು ಕಂಡುಬಂದಿಲ್ಲ.

**೩.೬. ಸವದತ್ತಿ ರಟ್ಟರು**

ಸವದತ್ತಿ ರಟ್ಟರು ಕ್ರಿ. ಶ. ೯೩೦ ರಿಂದ ೧೨೩೦ರ ವರೆಗೆ ಕುಹೂಂಡಿ-೩೦೦೦ ಪ್ರಾಂತದಲ್ಲಿ ಮಳಖೇಡದ ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಕಲಚೂರಿಯರ ಸಾಮಂತ, ಮಹಾಸಾಮಂತ, ಮಾಂಡಳೀಕ, ಮಹಾಮಾಂಡಳೀಕರಾಗಿ ಮತ್ತು ಕೆಲಕಾಲ ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದಾರೆ. ಜೈನ ಧರ್ಮದ ಅನುಯಾಯಿಗಳಾಗಿದ್ದ ಈ ಮನೆತನದ ಅರಸರು, ರಾಣಿಯರು, ಆಡಳಿತಾಧಿಕಾರಿಗಳು ಜೈನ ಧರ್ಮಕ್ಕೆ ಉದಾರವಾಗಿ ಆಶ್ರಯ ಮತ್ತು ಪ್ರೋತ್ಸಾಹವನ್ನು ನೀಡಿದ್ದಾರೆ. ರಟ್ಟ ಮನೆತನದಲ್ಲಿ ಮೇರದನಿಂದ ಪ್ರಾಂಭವಾದ ಶಾಖೆ ಮತ್ತು ನನ್ನನಿಂದ ಪ್ರಾರಂಭವಾದ ಶಾಖೆ ಎಂಬ ಎರಡು ಶಾಖೆಗಳು ಆಳ್ವಿಕೆ ನಡೆಸಿವೆ. ಒಂದನೆಯ ಶಾಖೆಗೆ ಸಂಬಂಧಿಸಿದ ಯಾವುದೇ ಶಾಸನಗಳು ಗೋಕಾಕ ತಾಲೂಕಿನಲ್ಲಿ ಲಭ್ಯವಾಗಿಲ್ಲ. ಎರಡನೆಯ ಶಾಖೆಗೆ ಸಂಬಂಧಿಸಿದ ಕೆಲವು ಅರಸರ ಶಾಸನಗಳು ಗೋಕಾಕ ತಾಲೂಕಿನಲ್ಲಿ ಲಭ್ಯವಾಗಿವೆ. ಕೊಣ್ಣೂರಿನ ಕ್ರಿ. ಶ. ೧೦೮೭ರ ಶಾಸನವು ಇಮ್ಮಡಿ ಸೇನ ಮತ್ತು ೧ನೆಯ ಕನ್ನನೃಪನ ಆಳ್ವಿಕೆಯನ್ನು ಮತ್ತು ಅವರು ಕೊಣ್ಣೂರಿನಲ್ಲಿ ಸ್ಥಳೀಯ ಮಹಾಪ್ರಭು ನಿಧಿಯಮ ಗಾವುಂಡನು ನಿರ್ಮಿಸಿದ್ದ ಬಸದಿಗೆ ದಾನ-ದತ್ತಿಗಳನ್ನು ಕೊಡಮಾಡಿರುವುದನ್ನು ಉಲ್ಲೇಖಿಸಿದೆ.[23] ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನವು ದೇವಗಿರಿಯ ಸೇಉಣ ಮನೆತನದ ಮಹಾಮಂಡಳೇಶ್ವರ ರಾಜರಸನು ಕಲ್ಲೊಳೆಯಲ್ಲಿ ನಿರ್ಮಿಸಿದ್ದ

ತ್ರಿಕೂಟ ಮಂಡಿತ ಶಾಂತಿನಾಥನ ಬಸದಿಗೆ ೞನೆಯ ಕಾರ್ತವೀರ್ಯನು ದಾನ-ದತ್ತಿಗಳನ್ನು ಕೊಟ್ಟಿರುವುದನ್ನು ಪ್ರಸ್ತಾಪಿಸಿದೆ.[24] ಕಲ್ಹೊಳೆಯ ಶಾಸನವು ೞನೆಯ ಕಾರ್ತವೀರ್ಯನ ರಾಜಾವಳಿಯ ನಾಲ್ಕು ತಲೆಮಾರಿನ ವಂಶಾವಳಿಯನ್ನು ಈ ಕೆಳಗಿನಂತೆ ನಿರೂಪಿಸಿದೆ.




**೩.೭. ಗೋವೆ ಕದಂಬರು ಮತ್ತು ಕೊಲ್ಲಾಪುರದ ಶಿಲಾಹಾರರು**

ಬೆಳಗಾವಿ ಜಿಲ್ಲೆಯ ಪ್ರದೇಶದ ಇಂದಿನ ಖಾನಾಪುರ, ಬೆಳಗಾವಿ, ಬೈಲಹೊಂಗಲ ತಾಲೂಕುಗಳ ಪರಿಸರದಲ್ಲಿ ಗೋವೆ ಕದಂಬರು ಕಲ್ಯಾಣದ ಚಾಲುಕ್ಯರ ಅಧೀನದಲ್ಲಿ ಮಹಾಮಂಡಳೇಶ್ವರರಾಗಿ ಆಳ್ವಿಕೆ ನಡೆಸಿದ್ದಾರೆ. ಅದೇ ರೀತಿ ಕೊಲ್ಲಾಪುರದ ಶಿಲಾಹಾರರು ಬೆಳಗಾವಿ ಜಿಲ್ಲೆಯ ಪ್ರದೇಶದ ಇಂದಿನ ಅಥಣಿ, ಚಿಕ್ಕೋಡಿ, ರಾಯಬಾಗ ತಾಲೂಕುಗಳ ಪರಿಸರದಲ್ಲಿ ಆಳ್ವಿಕೆ ಕೈಗೊಂಡಿದ್ದಾರೆ. ಈ ಎರಡು ಮನೆತನಗಳು ತಮ್ಮ ಆಳ್ವಿಕೆಯ ಪರಿಸರಗಳಲ್ಲಿ ಜೈನ ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿದ್ದಾರೆ.[25] ಆದರೆ ಆ ಮನೆತನಗಳಿಗೆ ಸಂಬಂಧಿಸಿದಂತೆ ಯಾವುದೇ ಕುರುಹುಗಳು ಗೋಕಾಕ ತಾಲೂಕಿನಲ್ಲಿ ಈ ವರೆಗೆ ದೊರೆತಿಲ್ಲ.

**೩.೮. ಕಲ್ಯಾಣದ ಕಲಚುರಿಗಳು**

ಕನ್ನಡ ನಾಡಿನಲ್ಲಿ ಕಲ್ಯಾಣದ ಕಲಚುರಿ ಮನೆತನದ (ಕ್ರಿ.ಶ. ೧೧೬೨-೧೧೮೩) ಆಳ್ವಿಕೆಯ ಕಾಲದಿಂದೀಚೆಗೆ ಸಮಕಾಲೀನ ವಿವಿಧ ಧಾರ್ಮಿಕ ಪಂಥಗಳಲ್ಲಿ ಪರಸ್ಪರ ಸಂಘರ್ಷಣೆಗಳೇ ಹೆಚ್ಚಾದವು. ಈ ಕಾಲದಲ್ಲಿ ರಾಜಕೀಯವಾಗಿ, ಸಾಮಾಜಿಕವಾಗಿ ಪ್ರಬಲವಾಗಿದ್ದ ವೀರಶೈವ ಮತ್ತು ಶ್ರೀವೈಷ್ಣವ ಧರ್ಮಗಳು ಜೈನ ಧರ್ಮದ ಪ್ರಭಾವವನ್ನು ದುರ್ಬಲಗೊಳಿಸಲು ಪ್ರಾರಂಭಿಸಿದವು. ಇದರಿಂದಾಗಿ ಸಾಮಾಜಿಕವಾಗಿ ಜೈನ ಧರ್ಮದ ಪ್ರಭಾವವು ಕ್ಷೀಣಿಸತೊಡಗಿತು. ರಾಜಕೀಯ ರಂಗಕ್ಕೆ ಬಂದ ಆಳರಸರ ಒಲವು ಸ್ವಾಭಾವಿಕವಾಗಿ ಪ್ರಬಲವಾಗಿದ್ದ ಧರ್ಮಗಳೆಡೆಗೆ ಹೆಚ್ಚಿತು. ಹೀಗಾಗಿ ಬಸದಿಗಳ ನಿರ್ಮಾಣ ಜೈನ ಧರ್ಮದೆಡೆಗೆ ಒಲವುಳ್ಳ ಮಾಂಡಳೀಕರು, ದಂಡನಾಯಕರು, ಅಧಿಕಾರಿಗಳಿಂದ ಮಾತ್ರ ಮುಂದುವರೆಯಿತು. ಗೋಕಾಕ ತಾಲೂಕಿನಲ್ಲಿ ಕಲಚುರಿ ಮನೆತನದ ಆಳ್ವಿಕೆಗೆ ಸಂಬಂಧಿಸಿದ ಶಾಸನ ಕುರುಹುಗಳಿವೆ.[26] ಆದರೆ ಈ ಅವಧಿಯಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಯಾವುದೇ ಚಟುವಟಿಕೆಗಳು ಜರುಗಿದಂತೆ ತೋರುವುದಿಲ್ಲ.

**೩.೯. ದೇವಗಿರಿಯ ಸೇವುಣರು**

ರಾಷ್ಟ್ರಕೂಟ ಮನೆತನದ ಉತ್ತರಾರ್ಧ ಕಾಲದಲ್ಲಿ ಮಾಂಡಳೀಕತ್ವವನ್ನು ಪಡೆದು ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಮಹಾಮಂಡಳೇಶ್ವರರಾಗಿ ಅನಂತರ ಇಂದಿನ ಮಹಾರಾಷ್ಟ್ರದ ದಕ್ಷಿಣ ಭಾಗದಲ್ಲಿ ಮತ್ತು ಕನ್ನಡ ನಾಡಿನ ಉತ್ತರ ಭಾಗದಲ್ಲಿ ಪರಮಾಧಿಕಾರ ಸ್ಥಾಪಿಸಿದ ಸೇವುಣ ಮನೆತನದ ಅರಸರು ಮತ್ತು ಆಡಳಿತಾಧಿಕಾರಿಗಳು

ವಿವಿಧ ಭಾಗಗಳಲ್ಲಿ ಬಸದಿಗಳ ನಿರ್ಮಾಣವನ್ನು ಕೈಗೊಂಡು ಉದಾರವಾಗಿ ದಾನ-ದತ್ತಿಗಳನ್ನು ಕೊಡಮಾಡಿದ್ದಾರೆ.[27] ಗೋಕಾಕ ತಾಲೂಕಿನಲ್ಲಿ ಸೇವುಣ ಮನೆತನದ ಆಳ್ವಿಕೆಗೆ ಸಂಬಂಧಿಸಿದ ಶಾಸನ ಕುರುಹುಗಳಿವೆ.[28] ಕಲ್ಲೊಳ್ಳಿಯ ಕ್ರಿ. ಶ. ೧೨೦೪ರ ಶಾಸನವು ಸೇವುಣ ಮನೆತನದ ಅಧೀನದಲ್ಲಿ ಹಗರಟಗೆ ನಾಡಿನಲ್ಲಿ ಮಹಾಮಂಡಳೇಶ್ವರ ಗೈಯುತ್ತಿದ್ದ ಯದು ವಂಶದ ಐದು ತಲೆಮಾರಿನ ವಂಶಾವಳಿಯನ್ನು ಈ ಕೆಳಗಿನಂತೆ ನಿರೂಪಿಸಿದೆ.[29]




ಈ ಮಹಾಮಂಡಳೇಶ್ವರ ಮನೆತನದ ಅರಸರು ಸವದತ್ತಿ ರಟ್ಟ ಮನೆತನದ ಅರಸರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದ್ದರು. ಹೀಗಾಗಿ ಅವರು ರಟ್ಟ ಮನೆತನದ ಆಳ್ವಿಕೆಯ ಪ್ರದೇಶದಲ್ಲಿ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡಿದ್ದಾರೆ. ಅವುಗಳಲ್ಲಿ ಇಮ್ಮಡಿ ರಾಜರಸನು ಗೋಕಾಕ ತಾಲೂಕಿನ ಕಲ್ಲೊಳ್ಳಿಯಲ್ಲಿ ನಿರ್ಮಿಸಿರುವ ಶಾಂತಿನಾಥ ಬಸದಿ ಪ್ರಮುಖವಾಗಿದೆ.

### ೩.೧೧. ವಿಜಯನಗರ, ಬಹಮನಿ ಮತ್ತು ಆದಿಲ್‌ಶಾಹಿಗಳು

ಸವದತ್ತಿ ರಟ್ಟ ಮನೆತನದ ಆಳ್ವಿಕೆಯ ತರುವಾಯ ಬೆಳಗಾವಿ ಜಿಲ್ಲೆಯ ಪ್ರದೇಶದ ಮಲಪ್ರಭಾ ನದಿಯ ದಕ್ಷಿಣ ಭಾಗವು (ಇಂದಿನ ಬೈಲಹೊಂಗಲ, ಸವದತ್ತಿ, ರಾಮದುರ್ಗ ತಾಲೂಕುಗಳ ಪರಿಸರ) ವಿಜಯನಗರ ಅರಸರ ಆಳ್ವಿಕೆಗೊಳಪಟ್ಟಿತ್ತು.[30] ಆ ಮನೆತನದ ಅರಸರು ಬೇರೆಡೆಯಲ್ಲಿ (ಶ್ರವಣಬೆಳಗೊಳ, ಹಂಪಿ ಇತ್ಯಾದಿ) ಜೈನ ಧರ್ಮಕ್ಕೆ ಆಶ್ರಯ-ಪ್ರೋತ್ಸಾಹ ನೀಡಿದಂತೆ ಈ ಪ್ರದೇಶದಲ್ಲಿ ನೀಡಿಲ್ಲ. ಗೋಕಾಕ ತಾಲ್ಲೂಕಗನಲ್ಲಿ ವಿಜಯನಗರ ಮನೆತನದ ಯಾವುದೇ ಅವಶೇಷಗಳು ಈವರೆಗೆ ಕಂಡುಬಂದಿಲ್ಲ. ವಿಜಯನಗರ ಸಮಕಾಲೀನರಾದ ಬಹಮನಿ ಸುಲ್ತಾನರು ಬೆಳಗಾವಿ ಜಿಲ್ಲೆಯ ಪ್ರದೇಶದ ಉತ್ತರ ಭಾಗದಲ್ಲಿ (ಇಂದಿನ ರಾಯಬಾಗ, ಅಥಣಿ, ಹುಕ್ಕೇರಿ, ಗೋಕಾಕ ತಾಲೂಕುಗಳ ಪರಿಸರ) ತಮ್ಮ ರಾಜಕೀಯ ಪ್ರಭಾವವನ್ನು ಹೊಂದಿದ್ದರು.[31] ಆದರೆ ಈ ಮನೆತನದ ಆಳ್ವಿಕೆಯ ಕಾಲಾವಧಿಯಲ್ಲಿ ಗೋಕಾಕ ಪರಿಸರದಲ್ಲಿ ಜೈನ ಚಟುವಟಿಕೆಗಳು ಜರುಗಿದ ನಿದರ್ಶನಗಳು ಗೋಚರಿಸುವುದಿಲ್ಲ.

ವಿಜಯನಗರ ಮತ್ತು ಬಹಮನಿ ಮನೆತನಗಳ ಸಮಕಾಲೀನರಾದ ವಿಜಾಪುರದ ಆದಿಲ್‌ಶಾಹಿಗಳ ರಾಜಕೀಯ ಪ್ರಭಾವಕ್ಕೂ ಬೆಳಗಾವಿ ಜಿಲ್ಲೆಯ ಕೆಲವು ಪ್ರದೇಶಗಳು ಒಳಪಟ್ಟಿದ್ದವು.[32] ಆದರೆ ಆದಿಲ್‌ಶಾಹಿಗಳು ಜೈನ ಧರ್ಮದೊಂದಿಗೆ ಹೊಂದಿದ ಸಂಬಂಧದ ಕುರಿತು ಸ್ಪಷ್ಟತೆಯಿಲ್ಲ. ವಿಜಯನಗರ ಅರಸರು ಹಿಂದು ಧರ್ಮಕ್ಕೆ

ಹಾಗೂ ಬಹಮನಿ ಸಹಲ್ತಾನರು ಮತ್ತು ಬಿಜಾಪುರದ ಆದಿಲ್‌ಶಾಹಿಗಳು ಇಸ್ಲಾಂ ಧರ್ಮಕ್ಕೆ ವಿಶೇಷವಾಗಿ ಪ್ರೋತ್ಸಾಹ ಕೊಡಮಾಡಿದ್ದರು. ಅಲ್ಲದೇ ಆ ಕಾಲದಲ್ಲಿ ಸಮಕಾಲೀನ ಧರ್ಮೀಯರಲ್ಲಿ ಪರಸ್ಪರ ಘರ್ಷಣೆಗಳೇ ಹೆಚ್ಚಾಗಿದ್ದವು. ಇಲ್ಲಿದ್ದ ಕೆಲವು ಜೈನ ಧರ್ಮೀಯರು ತಮ್ಮ ಸುರಕ್ಷತೆಗಾಗಿ ಕೃಷ್ಣಾ ನದಿಯೆಡೆಗೆ (ಇಂದಿನ ಸಾಂಗಲಿ, ಕೊಲ್ಲಾಪುರ ಜಿಲ್ಲೆಗಳ ಪರಿಸರ) ವಲಸೆ ಹೋದರು. ಮತ್ತೇ ಕೆಲವರು ಬೇರೆ ಧರ್ಮಗಳಿಗೆ ಮತಾಂತರರಾದರು.[33] ಪ್ರಸ್ತುತ ಗೋಕಾಕ ತಾಲೂಕಿನ ವಿವಿಧ ಗ್ರಾಮಗಳಲ್ಲಿ ನೆಲೆಸಿರುವ ಬಹುತೇಕ ಜೈನ ಧರ್ಮೀಯರು ೧೯ನೆಯ ಶತಮಾನದಿಂದೀಚೆಗೆ ವ್ಯಾಪಾರ, ಕೃಷಿ ಇತ್ಯಾದಿ ಉದ್ದೇಶಗಳಿಂದ ಬೇರೆಡೆಯಿಂದ ಬಂದು ನೆಲೆಸಿದ್ದಾರೆ.

**೩.೧೧. ಮರಾಠರು, ಪೇಶ್ವೆಗಳು ಮತ್ತು ಪಟವರ್ಧನರು**

ಬೆಳಗಾವಿ ಜಿಲ್ಲೆಯ ಕೆಲವು ಪ್ರದೇಶವು (ಇಂದಿನ ಚಿಕ್ಕೋಡಿ, ರಾಯಬಾಗ, ಹುಕ್ಕೇರಿ, ಗೋಕಾಕ ಅಥಣಿ ತಾಲೂಕುಗಳ ಪರಿಸರ) ಕ್ರಮವಾಗಿ ಮರಾಠರು, ಪೇಶ್ವೆಗಳು ಮತ್ತು ಪಟವರ್ಧನರ ಆಳ್ವಿಕೆಗೆ ಒಳಪಟ್ಟಿತ್ತು.[34] ಆ ಮನೆತನಗಳು ಹಿಂದೂ ಧರ್ಮ ಮತ್ತು ಸಂಸ್ಕೃತಿಯ ರಕ್ಷಣೆಗೆ ವಿಶೇಷ ಒತ್ತು ಕೊಟ್ಟಿದ್ದವು. ಜೈನ ಧರ್ಮದೊಂದಿಗೆ ಅವು ಹೊಂದಿದ ಸಂಬಂಧದ ಕುರಿತಾಗಲಿ, ಅವು ಜೈನ ಧರ್ಮಕ್ಕೆ ಕೊಡಮಾಡಿದ ರಾಜಾಶ್ರಯದ ಕುರಿತಾಗಲಿ ಮಾಹಿತಿಗಳ ಕೊರತೆಯಿದೆ.

**೩.೧೨. ಬ್ರಿಟಿಷರು ಮತ್ತು ನಂತರದ ಕಾಲ**

ಬ್ರಿಟಿಷರು ಭಾರತದಲ್ಲಿ ರಾಜಕೀಯ ಪ್ರಾಬಲ್ಯವನ್ನು ಸ್ಥಾಪಿಸಿದ ಪ್ರಾರಂಭದಲ್ಲಿ ಮತ್ತು ತರುವಾಯ ವ್ಯಾಪಾರಕ್ಕೆ ಹೆಚ್ಚಿನ ಒತ್ತು ಕೊಟ್ಟರು. ಕಾಲಕ್ರಮೇಣ ಇಲ್ಲಿನ ಧರ್ಮ, ಸಂಸ್ಕೃತಿ, ಇತಿಹಾಸ, ಜನಾಂಗ, ಆಚಾರ-ವಿಚಾರ, ಸಂಪ್ರದಾಯ ಮೊದಲಾದವುಗಳಲ್ಲಿ ಆಸಕ್ತಿ ತಳೆದರು. ಇದರ ಫಲವಾಗಿ ವಿವಿಧ ಸುಧಾರಣೆಗಳು ಮತ್ತು ಅಧ್ಯಯನಗಳೆಡೆಗೆ ಗಮನ ಹರಿಸಿದರು. ಅಂತಹ ಅಧ್ಯಯನಗಳಲ್ಲಿ ಭಾರತ ಪ್ರಾಚೀನ ಇತಿಹಾಸ, ಸಂಸ್ಕೃತಿ, ವಾಸ್ತುಕಲೆ, ಶಿಲ್ಪಕಲೆ, ಶಾಸನಗಳು, ಧರ್ಮಗಳ ಕುರಿತಾದ ಸಂಶೋಧನೆಗಳು ಮಹತ್ವದ್ದಾಗಿವೆ. ಅಂದು ಕನ್ನಡ ನಾಡು ಆಡಳಿತಾತ್ಮಕವಾಗಿ ಬಾಂಬೆ, ಮದ್ರಾಸ, ಮೈಸೂರು, ಹೈದರಾಬಾದ, ಕೊಡಗು ಎಂಬ ಐದು ಪ್ರಾಂತಗಳಲ್ಲಿ ಹಂಚಿಹೋಗಿತ್ತು. ಬೆಳಗಾವಿ ಜಿಲ್ಲೆಯು ಬಾಂಬೆ ಪ್ರಾಂತದ ಆಡಳಿತಕ್ಕೊಳಪಟ್ಟಿತ್ತು. ಬೆಳಗಾವಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಬ್ರಿಟಿಷ ಅಧಿಕಾರಿಗಳು ಗೋಕಾಕ ತಾಲೂಕಿನಲ್ಲಿ ಶಿಕ್ಷಣ, ರೈಲು, ಹೆದ್ದಾರಿಗಳ ಅಭಿವೃದ್ಧಿಯನ್ನು ಕೈಗೊಂಡಿದ್ದಾರೆ. ಗೋಕಾಕದ ಹತ್ತಿರ (ಜಲಪಾತ) ೧೮೮೫ರಲ್ಲಿ ಜವಳಿ ಗಿರಣಿಯನ್ನು ಮತ್ತು ೧೮೮೭ರಲ್ಲಿ ವಿದ್ಯುತ್ ಉತ್ಪಾದನೆಯನ್ನು (Hydro-electric unit) ಪ್ರಾರಂಭಿಸಿದರು.[35]

ಕ್ರಿ. ಶ. ಸುಮಾರು ೧೨ನೆಯ ಶತಮಾನದಿಂದೀಚೆಗೆ ಇಳಿಮುಖದೆಡೆಗೆ ಸಾಗುತ್ತ ನಡೆದ ಜೈನ ಧರ್ಮವನ್ನು ಮತ್ತೆ ಪುನರುಜ್ಜೀವನ ಕೈಗೊಳ್ಳಲು ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ನಾಡಿನಲ್ಲೆಲ್ಲ ಜೈನ ಧರ್ಮೀಯರು ಸಂಘಟನೆಗಳನ್ನು ಪ್ರಾರಂಭಿಸಿದರು. ಅದರ ಫಲವಾಗಿ ಬಾಂಬೆ ಪ್ರಾಂತದಲ್ಲಿ ೧೮೯೫ರಲ್ಲಿ ಭಾರತ ವರ್ಷಿಯ ದಿಗಂಬರ ಜೈನ ಮಹಾಸಭಾ ಮತ್ತು ಚಿಕ್ಕೋಡಿ ತಾಲ್ಲೂಕಿನ ಸ್ತವನಿಧಿಯಲ್ಲಿ ೧೮೯೯ರಲ್ಲಿ ಜೈನ ಪ್ರಾತಿನಿಧಿಕ ಸಭೆ (ದಕ್ಷಿಣ ಭಾರತ ಜೈನ ಸಭಾ) ಪ್ರಾರಂಭವಾದವು. ಈ ಸಂಘಟನೆಗಳು ಬ್ರಿಟಿಷ ಅಧಿಕಾರಿಗಳ ಸಹಕಾರದಿಂದ ಅನ್ಯರ ಆಕ್ರಮಣದಿಂದ ಜೈನ ಧರ್ಮದ ಸಂರಕ್ಷಣೆ, ಬಸದಿಗಳ ಜೀರ್ಣೋದ್ಧಾರ, ಧಾರ್ಮಿಕ ಪಾಠಶಾಲೆಗಳ

ಪ್ರಾರಂಭ, ಶಿಕ್ಷಣ ಸಂಸ್ಥೆಗಳ ಸ್ಥಾಪನೆ, ವಿದ್ಯಾರ್ಥಿನಿಲಯಗಳ ಸ್ಥಾಪನೆ, ಜೈನ ಸಂಸ್ಕೃತಿ ಪ್ರಸಾರ, ದಾನ ಶಾಲೆಗಳ ಪ್ರಾರಂಭ, ಜೈನ ಪತ್ರಿಕೆಗಳ ಪ್ರಾರಂಭ, ಗ್ರಂಥಾಲಯಗಳ ಸ್ಥಾಪನೆ, ವಿದ್ಯಾರ್ಥಿವೇತನಗಳ ಪ್ರಾರಂಭ, ಜೈನ ಕೇಂದ್ರಗಳ ಜೀರ್ಣೋದ್ಧಾರ, ಗ್ರಂಥಗಳ ಪ್ರಕಾಶನ ಮೊದಲಾದ ಚಟುವಟಿಕೆಗಳನ್ನು ಪ್ರಾರಂಭಿಸಿದವು.[36] ಇಂದಿಗೂ ಈ ಸಂಘಟನೆಗಳು ಕಾರ್ಯೋನ್ಮುಖವಾಗಿವೆ. ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ದಕ್ಷಿಣ ಭಾರತ ಜೈನ ಸಭೆಯು ಒಟ್ಟು ೧೭೫ ಶಾಖೆಗಳಿವೆ. ಗೋಕಾಕದಲ್ಲಿ ಈ ಸಭೆಯ ಶಾಖೆಯಿದ್ದು, ಇದು ಗೋಕಾಕ ಪರಿಸರದಲ್ಲಿ ಜೈನ ಚಟುವಟಿಕೆಗಳನ್ನು ಮುಂದುವರೆಸಿದೆ. ೨೦ನೆಯ ಶತಮಾನದಿಂದೀಚೆಗೆ ಗೋಕಾಕ ತಾಲೂಕಿನ ಪರಿಸರದಲ್ಲಿ ಆಚಾರ್ಯ ಶಾಂತಿಸಾಗರರು, ಆಚಾರ್ಯ ಪಾಯಸಾಗರರು, ಆಚಾರ್ಯ ಸುಬಲಸಾಗರರು ಮೊದಲಾದ ಮುನಿಗಳು, ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕ ಪಟ್ಟಾಚಾರ್ಯರು, ಸಂಘ-ಸಂಸ್ಥೆಗಳು, ವಿದ್ವಾಂಸರು, ವ್ಯಾಪಾರಿಗಳು, ಜೈನಾಭಿಮಾನಿಗಳು, ಜೈನ ಧರ್ಮ ಪ್ರಸಾರವನ್ನು ಕೈಗೊಳ್ಳುತ್ತ ಸಮಾಜದ ಜಾಗೃತಿಯಲ್ಲಿ ತೊಡಗಿದ್ದಾರೆ. ಹೀಗೆ ಗೋಕಾಕ ತಾಲೂಕಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಮತ್ತು ತಮ್ಮ ಆಳ್ವಿಕೆಯ ಪ್ರಭಾವವನ್ನಿಟ್ಟುಕೊಂಡಿದ್ದ ಅರಸು, ಮಹಾಮಂಡಳೇಶ್ವರ ಮತ್ತು ಸ್ಥಳೀಯ ಗಾವುಂಡ ಮನೆತನಗಳ ಆಶ್ರಯ-ಪ್ರೋತ್ಸಾಹದಡಿಯಲ್ಲಿ ತನ್ನ ಸಾಂಸ್ಕೃತಿಕ ವಲಯವನ್ನು ವಿಸ್ತರಿಸಿಕೊಳ್ಳುತ್ತ ಬೆಳೆದ ಜೈನ ಧರ್ಮವು 'ಅಹಿಂಸಾ ಪರಮೋ ಧರ್ಮ'ದಿಂದ ಜನಮನ್ನಣೆಯನ್ನು ಪಡೆಯುತ್ತ ಮತ್ತು ಸಕಲ ಜೀವಿಗಳ ಕಲ್ಯಾಣವನ್ನೂ ಬಯಸುತ್ತ ತನ್ನ ಗೌರವಯುತವಾದ ಸ್ಥಾನಮಾನಗಳನ್ನು ಭದ್ರಪಡಿಸಿಕೊಂಡು ಭವಿಷ್ಯದೆಡೆಗೆ ಹೆಜ್ಜೆಹಾಕಿದೆ.

## ಅಡಿಟಿಪ್ಪಣಿಗಳು

1. ಮಿರ್ಜಿ ಅಣ್ಣಾರಾಯ, ಜೈನಧರ್ಮ (೧೯೯೭), ಪು. ೧೧-೪೯.
2. ಅದೇ, ಪು. ೨೧೧-೨೧೫ ಮತ್ತು ೩೩೫-೩೮೭.
3. ಅದೇ, ಪು. ೫೩-೮೪.
4. ಅದೇ.
5. ಹಂಜೆ ಅಪ್ಪಣ್ಣ ಎನ್., "ಸಾಹಿತ್ಯ ಮತ್ತು ಶಾಸನಗಳಲ್ಲಿ ಭದ್ರಬಾಹು ಭಟ್ಟಾರಕರು ಮತ್ತು ಚಂದ್ರಗುಪ್ತ", ಅರವಂಟಿಗೆ ಸಂ. ೧ / ೧ (ಜೂನ್-೨೦೦೮), ಪು. ೧೦-೧೯.
6. ಸಾಲೇತೊರೆ ಬಿ. ಎ., ಮಿಡಿವಲ್ ಜೈನಿಸಮ್ (೧೯೩೮), ಪು. ೪.
7. ಕಲಬುರ್ಗಿ ಎಂ. ಎಂ., "ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳ ನಾಶ", ಮಾರ್ಗ ಸಂ. ೩ (೧೯೯೮), ಪು. ೪೦.
8. ಹಂಜೆ ಅಪ್ಪಣ್ಣ ಎನ್., "ಜಿನಾಲಯಗಳು : ನಾಶ, ರೂಪಾಂತರ, ಜೀರ್ಣೋದ್ಧಾರ ಮತ್ತು ಪ್ರತಿಬದ್ಧ", (ಅಚ್ಚಿನಲ್ಲಿದೆ).
9. ಎ. ಕ. ಸಂ. VIII-II, ಶಾ. ಸಂ. ೨೬೧.
10. ಶಿವತಾರಕ್ ಕೆ. ಬಿ., ಕರ್ನಾಟಕದ ಪುರಾತತ್ವ ನೆಲೆಗಳು (೨೦೦೧), ಪು. ೫೦೪-೫೦೭.
11. ದೇವೀರಪ್ಪ ಎಚ್. (ಸಂ.), ಸಿಂಗಿರಾಜ ಕವಿಕೃತ ಸಿಂಗಿರಾಜ ಪುರಾಣ (೧೯೫೦), ನಾಲ್ಕನೆಯ ಸಂಧಿ, ಪ. ಸಂ. ೧೧, ಪು. ೪೩. ಎಸ್. ಆಯ್. ಆಯ್. ಸಂ.IX-I, ಶಾ. ಸಂ. ೨೪೯.

12. ಕನ್ನಡ ನಾಡಿನ ಮಸ್ಕಿ, ಕೊಪ್ಪಳ, ಸನ್ನತಿ, ನಿಟ್ಟೂರು, ಉಡೆಗೊಳ, ಬ್ರಹ್ಮಗಿರಿ, ಸಿದ್ದಾಪುರ, ಜಟಂಗಿರಾಮೇಶ್ವರ ಮೊದಲಾದ ಸ್ಥಳಗಳಲ್ಲಿ ಮೌರ್ಯ ಮನೆತನದ ಶಾಸನಗಳು ದೊರೆತಿವೆ. (ಕ. ವಿ. ಶಾ. ಸಂ. ೧, ಶಾ. ಸಂ. ೪೯, ೫೦, ೫೧ ಮತ್ತು ೫೨).
13. ನೇಗಿನಹಾಳ ಎಂ. ಬಿ., "ಬೆಳಗಾವಿ ನಗರದ ಪ್ರಾಚೀನ ಇತಿಹಾಸ", ನೇಗಿನಹಾಳ ಪ್ರಬಂಧಗಳು (೧೯೯೯), ಪು. ೫೨-೫೩.
14. ಹಂಜೆ ಅಪ್ಪಣ್ಣ ಎನ್., "ಸಾಹಿತ್ಯ ಮತ್ತು ಶಾಸನಗಳಲ್ಲಿ ಭದ್ರಬಾಹು ಭಟ್ಟಾರಕರು ಮತ್ತು ಚಂದ್ರಗುಪ್ತ", ಪೂರ್ವೋಕ್ತ.
15. ಗೋಪಾಲ ಬಾ. ರಾ., ಬನವಾಸಿ ಕದಂಬರು (೧೯೮೩), ಶಾ. ಸಂ. ೩, ೧೪, ೧೮, ೨೨, ೨೪.
16. ಆಯ್. ಎ. ಸಂ. XXI, ಪು. ೯೩.
17. ದೇಸಾಯಿ ಪಿ. ಬಿ., "ಹೂಲಿ ಪ್ಲೇಟ್ಸ್ ಆಫ್ ಮಂಗಳರಾಜ", ದ ಜರ್ನಲ್ ಆಫ್ ಕರ್ನಾಟಕ ಯುನಿವರ್ಸಿಟಿ ಸಂ. ೫, ಪು. ೧೭೫.
18. ಎ. ಆರ್. ಎಸ್. ಆಯ್. ಇ. ೧೯೫೨-೫೩, ಶಾ. ಸಂ. ೮೮.
19. ಹಂದೂರ ಬಿ. ಆರ್., ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ (೨೦೦೨), ಪು. ೨೫-೩೨.
20. ಎ. ಆಯ್. ಸಂ. XXI, ಶಾ.ಸಂ. ೪೩.
21. ಹಂಪ ನಾಗರಾಜಯ್ಯ, "ಜೈನಿಸಮ್ ಅಂಡರ್ ಚಾಳುಕ್ಯಾಸ್ ಆಫ್ ಕಲ್ಯಾಣ", ಜಿನಮಂಜರಿ, ಸಂ. ೨೧ / ೧ (ಏಪ್ರಿಲ್-೨೦೦೦), ಪು. ೧೮-೨೧. ಗೋಪಾಲರಾವ್ ಎಚ್. ಎಸ್., ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣದ ಚಾಲುಕ್ಯರ ದೇವಾಲಯಗಳು (೧೯೯೩), ಪು. ೬೯-೭೪.
22. ಜೆ. ಬಿ. ಬಿ. ಆರ್. ಎ. ಎಸ್. ಸಂ. X, ಪು. ೨೮೭.
23. ಅದೇ.
24. ಗುರವ ಆರ್. ಎನ್., "ಪಾರ್ಶ್ವಪಂಡಿತನ ಕಲ್ಹೊಳೆಯ ಶಾಸನ", ಕರ್ನಾಟಕ ಭಾರತಿ ಸಂ. ೭/೩ (ಜನೇವರಿ-೧೯೭೪), ಪು. ೪೩-೫೪.
25. ಕಾಮತ್ ಸೂರ್ಯನಾಥ (ಸಂ.), ಬೆಳಗಾವಿ ಜಿಲ್ಲೆಯ ಗೆಜೆಟಿಯರ್ (೧೯೮೭), ಪು. ೯೩-೯೭.
26. ಎ. ಆರ್. ಎಸ್. ಆಯ್. ಇ. ೧೯೫೨-೫೩, ಶಾ. ಸಂ. ೫೧, ೫೨. ೫೩.
27. ರಿತ್ತಿ ಶ್ರೀನಿವಾಸ, ದಿ ಸೇವುಣಾಸ್ (ದಿ ಯಾದವಾಸ್ ಆಫ್ ದೇವಗಿರಿ-೧೯೭೩), ಪು. ೨೫೬-೨೫೯.
28. ಎ. ಆಯ್. ಸಂ. XIX, ಪು. ೧೯-೨೬.
29. ಗುರವ ಆರ್. ಎನ್., ಪೂರ್ವೋಕ್ತ.
30. ಕಾಮತ್ ಸೂರ್ಯನಾಥ (ಸಂ.), ಬೆಳಗಾವಿ ಜಿಲ್ಲೆಯ ಗೆಜೆಟಿಯರ್ (೧೯೮೭), ಪು. ೩೦-೪೫.

31. ಅದೇ.

32. ಅದೇ, ಪು. ೧೦೮.

33. ಹಂಜೆ ಅಪ್ಪಣ್ಣ ಎನ್., "ಕೃಷ್ಣಾನದಿ ತೀರದ ಜಿನಾಲಯಗಳು : ನಾಶ, ರೂಪಾಂತರ, ಜೀರ್ಣೋದ್ಧಾರ ಮತ್ತು ಪ್ರತಿಬದ್ಧ", ಕೃಷ್ಣಾತೀರ ಜಿನಸಿರಿ (ದಕ್ಷಿಣ ಭಾರತ ಜೈನ ಸಭೆಯ ೮೯ನೇ ವಾರ್ಷಿಕ ಅಧಿವೇಶನದ ಸ್ಮರಣ ಸಂಚಿಕೆ-೨೦೦೮), ಪು. ೮೪-೮೮.

34. ಕಾಮತ್ ಸೂರ್ಯನಾಥ (ಸಂ.), ಪೂರ್ವೋಕ್ತ, ಪು. ೧೨೩-೧೨೫.

35. ಅದೇ, ಪು. ೧೨೮-೧೩೪.

36. ಬೇಡಕಿಹಾಳ ಆರ್. ಎನ್., "ದಕ್ಷಿಣ ಭಾರತ ಜೈನ ಸಭೆಯು ಸಾಗಿಬಂದ ದಾರಿ", ಕೃಷ್ಣಾತೀರ ಜಿನಸಿರಿ, ಪೂರ್ವೋಕ್ತ, ಪು. ೧೩೫-೧೪೨.



## ಅಧ್ಯಾಯ : ಮೂರು

# ಶಾಸನಗಳಲ್ಲಿ ಜೈನಧರ್ಮ

### ೧. ಪೀಠಿಕೆ

ಶಾಸನ ಎಂಬ ಸಂಸ್ಕೃತ ಪದವು ಆಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂಬರ್ಥಗಳನ್ನು ಹೊಂದಿದೆ.[1] ಅದು ಪ್ರಾಚೀನ ಕಾಲದಲ್ಲಿ ಅರಸರ ಆಜ್ಞೆಗಳನ್ನು ತಿಳಿಸುವ ಬರಹಗಳು ಎಂಬರ್ಥದಲ್ಲಿ ಬಳಸಲ್ಪಡುತ್ತಿತ್ತು. ಕಾಲಾನುಕ್ರಮದಲ್ಲಿ ಶಾಸನದ ವ್ಯಾಪ್ತಿಯೊಳಗೆ ವಿವಿಧ ಬಗೆಯ ಸಂಕೀರ್ಣ ವಿಷಯಗಳು ಸಂಸರ್ಗವಾಗಿ ವಿಶಾಲಾರ್ಥವನ್ನು ಪಡೆಯಿತು. ಡಿ. ಸಿ. ಸರ್ಕಾರ್ ಅವರು ಶಾಸನ ಲಕ್ಷಣವನ್ನು "ಯಾವುದಾದರೊಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವು ಶಾಸನ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಜೆ. ಎಫ್. ಫ್ಲೀಟ್ ಅವರು ಶಾಸನಗಳ ಮೂಲಾರ್ಥ ಮತ್ತು ಅವುಗಳ ವಿಸ್ತಾರವನ್ನು ಗಮನದಲ್ಲಿರಿಸಿಕೊಂಡು "ಶಾಸನಗಳು ಬಹು ಸಂದರ್ಭಗಳಲ್ಲಿ ಅಧಿಕೃತ ಲಕ್ಷಣವುಳ್ಳ, ಸಾರ್ವಜನಿಕ ಸ್ವರೂಪವುಳ್ಳ, ಸರಳವಾದ ಅಥವಾ ಸಂಕೀರ್ಣವಾದ ಸಂಗತಿಗಳನ್ನು ನಿರೂಪಿಸುವ, ದಿನಾಂಕವಿರುವ ಅಥವಾ ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಕುರಿತು ಶಾಶ್ವತವಾದ ದಾಖಲೆಗಳಾಗಬೇಕೆಂದು ಉದ್ದಿಷ್ಟವಾದ ಪ್ರಕಟನೆಗಳು" ಎಂದು ಶಾಸನಗಳ ಲಕ್ಷಣಗಳನ್ನು ಸಮರ್ಪಕವಾಗಿ ನಿರೂಪಿಸಿದ್ದಾರೆ. ಈ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಶಾಸನಗಳು ಗಟ್ಟಿಯಾದ ವಸ್ತುಗಳ ಮೇಲೆ ಕೊರೆದ ವಿಶೇಷತಃ ಸಾರ್ವಜನಿಕ ಸ್ವರೂಪವನ್ನೊಳಗೊಂಡು ಸಾರ್ವತ್ರಿಕ ಅವಗಾಹನೆಗಾಗಿ ಉದ್ದಿಷ್ಟವಾದವುಗಳೆಂದು ಸ್ಪಷ್ಟವಾಗುತ್ತದೆ.[2]

ಪ್ರಾರಂಭದಲ್ಲಿ ಅರಸನ ಆಜ್ಞೆಗಳನ್ನು ಪ್ರಜೆಗಳಿಗೆ ತಿಳಿಸುವುದು ಮತ್ತು ದೇಶದಲ್ಲಿ ಪ್ರಚಾರಿಸುವುದೇ ಶಾಸನ ನಿರ್ಮಾಣದ ಮುಖ್ಯೋದ್ದೇಶವಾಗಿತ್ತು. ತರುವಾಯ ತಾನು ಕೈಗೊಂಡ ಕಾರ್ಯಗಳು ಚಿರಸ್ಥಾಯಿಯಾಗಿರಬೇಕು. ಪ್ರಜೆಗಳ ಮನಸ್ಸಿನಲ್ಲಿ ಸರ್ವದಾ ಇರಬೇಕು. ತಾನು ವಿವಿಧ ಚಟುವಟಿಕೆಗಳಿಗೆ ಮಾಡಿದ ದಾನ ಮತ್ತು ತತ್ಸಂಬಂಧಿ ಕಟ್ಟಳೆಗಳು ಅವಿಚ್ಛಿನ್ನವಾಗಿ ಮುನ್ನಡೆದುಕೊಂಡು ಬರಬೇಕೆಂಬ ಹಂಬಲ ಮತ್ತು ಆಶಯವೇ ಶಾಸನ ನಿರ್ಮಾಣಕ್ಕೆ ಪ್ರಧಾನೋದ್ದೇಶವಾಯಿತು. ಕಾಲಾನುಕ್ರಮದಲ್ಲಿ ಆಡಳಿತ, ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು, ಕಟ್ಟಳೆ, ವಿಧಿ, ನಿಗ್ರಹ, ಹಿಡಿತ, ಶಿಲಾಲೇಖ, ತಾಮ್ರಲೇಖ, ದಾಖಲೆ, ಶಿಕ್ಷೆ, ದಂಡನೆ, ಶಾಸ್ತಿ, ಒಪ್ಪಂದ, ಕರಾರು ಎಂಬಿತ್ಯಾದಿ ವ್ಯಾಪಕ ಅರ್ಥವನ್ನು ಪಡೆದುಕೊಂಡಿತು. ಕ್ರಿ. ಶ. ೧೧೨೫ರ ಶಾಸನವು ನಾಕಿರಾಜನ ಸದ್ಗುಣಗಳನ್ನು ಸೂಚಿಸುತ್ತ ಶಾಸನಗಳ ಕೆಲವು ಪ್ರಭೇದಗಳನ್ನು (ಸಾಹಸ, ಜಯ, ಶೌರ್ಯ, ಗುಣ, ಐಶ್ವರ್ಯ, ದಾನ) ಸೂಚಿಸಿದೆ. ಆ ಹಿನ್ನೆಲೆಯಲ್ಲಿ ಶಾಸನಗಳನ್ನು ವ್ಯವಸ್ಥಿತವಾದ ಅಧ್ಯಯನದ ಅನುಕೂಲಕ್ಕಾಗಿ ನಿರ್ಮಾತೃ ವಿಷಯ ಮತ್ತು ವಸ್ತು ಆಧಾರಿತವಾಗಿ ವರ್ಗೀಕರಿಸಲಾಗಿದೆ. ಅದೇ ಬಗೆಯಲ್ಲಿ ಪ್ರದೇಶ, ಭಾಷೆ, ಲಿಪಿ, ಅರಸು ವಂಶ ಹಾಗೂ ಧರ್ಮಾಧಾರಿತವಾಗಿಯೂ ವರ್ಗೀಕರಿಸಬಹುದು.

ಶಾಸನಗಳ ರಚನೆ, ಸಿದ್ಧತೆ ಮತ್ತು ಸಂರಕ್ಷಣೆಯ ಕುರಿತಾಗಿ ಧರ್ಮಶಾಸ್ತ್ರಗಳು, ಸ್ಮೃತಿಗಳು, ಶುಕ್ರನೀತಿಸಾರ, ಕೌಟಿಲ್ಯನ ಅರ್ಥಶಾಸ್ತ್ರ, ಕ್ಷೇಮೇಂದ್ರ ವ್ಯಾಸದಾಸನ ಲೋಕಪ್ರಕಾಶ, ಲೇಖಪಂಚಾಶಿಖಾ, ಲೇಖಪದ್ಧತಿ ಮೊದಲಾದ ಕೆಲವು ಪ್ರಾಚೀನ ಕೃತಿಗಳು ಉಪಯುಕ್ತ ಸಲಹೆ-ಸೂಚನೆಗಳನ್ನು ನಿರ್ದೇಶಿಸಿವೆ. ಶಾಸನಗಳ ಸಿದ್ಧತೆಯಲ್ಲಿ

ಸಾಮಾನ್ಯವಾಗಿ ಕೃತಿಕಾರ, ಲಿಪಿಕಾರ ಮತ್ತು ಶಿಲ್ಪಿ ಪ್ರಮುಖ ಪಾತ್ರವಹಿಸುತ್ತಿದ್ದರು. ಪ್ರಾರಂಭದ ಶಾಸನಗಳು ನಿರ್ಮಿತ ಮತ್ತು ನಿರೂಪಣೆಯಲ್ಲಿ ವ್ಯವಸ್ಥಿತವಾದ ಕ್ರಮವನ್ನು ಅನುಸರಿಸಿಲ್ಲ. ಇವು ನೈಸರ್ಗಿಕ ಬಂಡೆಗಲ್ಲುಗಳ ಮೇಲೆ ನೇರವಾದ ವಿಷಯ ಮತ್ತು ಸರಳತೆಯಿಂದ ಕೂಡಿವೆ. ಕಾಲಾನುಕ್ರಮದಲ್ಲಿ ಇವುಗಳ ರಚನಾ ಕ್ರಮದಲ್ಲಿ ಒಂದು ನಿರ್ದಿಷ್ಟ ಸ್ವರೂಪವನ್ನು ಅಳವಡಿಸಿಕೊಳ್ಳಲಾಯಿತು. ದಾನ ಶಾಸನಗಳಲ್ಲಿ ವಿಷಯ ನಿರೂಪಣೆ ಸ್ಥೂಲವಾಗಿ ಪೀಠಿಕೆ, ಪ್ರಕಟನೆ ಮತ್ತು ಮುಕ್ತಾಯ ಎಂಬ ಮೂರು ಹಂತಗಳಲ್ಲಿರುತ್ತದೆ. ಪೀಠಿಕೆಯಲ್ಲಿ ಮಂಗಳವಾಚಕ, ಪ್ರಾರ್ಥನಾ ಪದ್ಯ, ಶಾಸನದ ದಾತೃಗಳ ವಂಶಾವಳಿ, ದಾನಕ್ಕೆ ಸಂಬಂಧಿಸಿದಂತೆ ಆದೇಶ, ದಾನ ಮಾಡಿದ ಕಾಲಮಾನ, ಪ್ರಕಟನೆಯಲ್ಲಿ ದಾನದ ಸ್ಪಷ್ಟೀಕರಣ, ದಾನಿಯ ಹೆಸರು, ದಾನ ಮಾಡಿದ ಉದ್ದೇಶ ಮತ್ತು ಸಂದರ್ಭ, ದಾನವಿತ್ತ ಭೂಮಿಯ ಮೇರೆಗಳು, ಮುಕ್ತಾಯದಲ್ಲಿ ಫಲಶ್ರುತ ಪದ್ಯ/ಗದ್ಯ, ಶಾಸನವನ್ನು ಖಂಡರಿಸಿದವರ ಉಲ್ಲೇಖ, ಸಾಕ್ಷಿದಾರರ ಮಾಹಿತಿ, ಅರಸನ ಒಪ್ಪಿಗೆ ಕುರಿತು ಹಸ್ತಾಕ್ಷರದ ರುಜುವಾತು - ಅಂಶಗಳಿರುತ್ತವೆ. ಈ ರೀತಿಯ ಕ್ರಮ ಎಲ್ಲ ಶಾಸನಗಳಲ್ಲಿ ಇರುತ್ತದೆಂದು ಹೇಳಲಿಕ್ಕಾಗದು.

ಕನ್ನಡ ನಾಡಿನಲ್ಲಿ ಇದುವರೆಗೆ ಸುಮಾರು ಐದು ಸಾವಿರ ಜೈನ ಶಾಸನಗಳು ಬೆಳಕಿಗೆ ಬಂದಿವೆ. ಎಲ್ಲ ಧರ್ಮದ ಶಾಸನಗಳು ಭೌತಿಕ ಲಕ್ಷಣಗಳಲ್ಲಿ ಒಂದೇ ರೀತಿಯಾಗಿದ್ದರೂ ಮೇಲ್ಭಾಗದ ಶಿಲ್ಪಪಟ್ಟಿಕೆಗಳಲ್ಲಿ ಆಯಾ ಧರ್ಮದ ಶಿಲ್ಪಗಳನ್ನು ತೋರಿಸಲಾಗಿರುತ್ತದೆ. ಜೈನ ಶಾಸನಗಳ ಶಿಲ್ಪಪಟ್ಟಿಕೆಗಳಲ್ಲಿ ಸಾಮಾನ್ಯವಾಗಿ ಪರ್ಯಂಕಾಸನದಲ್ಲಿರುವ ತೀರ್ಥಂಕರ, ಸೂರ್ಯ, ಚಂದ್ರ, ದಾನ ಮಾಡಿದ ವ್ಯಕ್ತಿಗಳನ್ನು ಪ್ರತಿನಿಧಿಸುವ ಸ್ತ್ರೀ/ಪುರುಷರ ಶಿಲ್ಪಗಳ ನಿರೂಪಣೆಗಳಿರುತ್ತವೆ. ಆಯಾ ಧರ್ಮದ ಶಾಸನಗಳು ತಮ್ಮ ಧರ್ಮದ ಆರಾಧ್ಯ ದೈವವನ್ನು ಸ್ತುತಿಸುವ ವಿವಿಧ ಮಂಗಳ ಪದ್ಯಗಳಿಂದ ಪ್ರಾರಂಭವಾಗಿರುತ್ತವೆ. ಜೈನ ಪರವಾದ ಬಹುತೇಕ ಶಾಸನಗಳ ಆರಂಭದಲ್ಲಿ _

ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛನಂ |

ಜೀಯಾತ್ತ್ರೈಲೋಕ್ಯನಾಥಸ್ಯಶಾಸನಂ ಜಿನಶಾಸನಂ ||

ಎಂಬ ಅಕಳಂಕಾಚಾರ್ಯನ (ಕ್ರಿ. ಶ. ೭೨೦-೭೮೦) 'ಪ್ರಮಾಣ ಸಂಗ್ರಹ' ಕೃತಿಯಲ್ಲಿರುವ ಸಂಸ್ಕೃತ ಪ್ರಾರ್ಥನಾ ಪದ್ಯ ಕಂಡುಬರುತ್ತದೆ. ಶ್ರವಣಬೆಳಗೊಳದ ಕ್ರಿ. ಶ. ಸುಮಾರು ೭ನೆಯ ಶತಮಾನದ ಶಾಸನವೇ ಕನ್ನಡ ನಾಡಿನ ಅತೀ ಪ್ರಾಚೀನ ಜೈನ ಶಾಸನವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಆದರೆ ಶಾಸನ ಸಂಪತ್ತಿನಲ್ಲಿ ಸಮೃದ್ಧವಾಗಿರುವ ಕನ್ನಡ ನಾಡಿನಲ್ಲಿ ಮಸ್ಕಿ, ಕೊಪ್ಪಳ, ನಿಟ್ಟೂರು, ಉದೆಗೊಳಂ, ಬ್ರಹ್ಮಗಿರಿ, ಸಿದ್ಧಾಪುರ, ಜಟಂಗಿರಾಮೇಶ್ವರ, ಸನ್ನತಿಯಲ್ಲಿ ದೊರೆತ ಮೌರ್ಯ ಮನೆತನದ ಅಶೋಕ ಚಕ್ರವರ್ತಿಯ ಕ್ರಿ. ಪೂ. ಸುಮಾರು ೩ನೆಯ ಶತಮಾನದ ಶಾಸನಗಳೇ ಅತೀ ಪ್ರಾಚೀನ ಶಾಸನಗಳಾಗಿವೆ. ಇವು ಬ್ರಾಹ್ಮೀ ಲಿಪಿ (ಬ್ರಹ್ಮಗಿರಿಯ ಶಾಸನದಲ್ಲಿ 'ಲಿಪಿಕರೇಣ' ಎಂಬ ಕೊನೆಯ ಪದವು ಖರೋಷ್ಠಿ ಲಿಪಿಯಲ್ಲಿದೆ) ಮತ್ತು ಪ್ರಾಕೃತ ಭಾಷೆಯಲ್ಲಿವೆ. ತರುವಾಯದ ಶಾಸನಗಳು ಕನ್ನಡ, ತೆಲಗು, ದೇವನಾಗರಿ ಲಿಪಿ ಮತ್ತು ಸಂಸ್ಕೃತ, ಕನ್ನಡ, ತೆಲಗು, ಉರ್ದು ಭಾಷೆಗಳಲ್ಲಿ ಬರೆಯಲ್ಪಟ್ಟಿವೆ. ಇವು ಸಮಕಾಲೀನ ರಾಜಕೀಯ, ಆಡಳಿತ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಂಸ್ಕೃತಿ, ಸಾಹಿತ್ಯ, ಭಾಷೆ, ಕಲೆ ಮೊದಲಾದ ಸಂಗತಿಗಳ ಅಧ್ಯಯನಕ್ಕೆ ಬಹು ಮಹತ್ವದ ಆಕರಗಳಾಗಿವೆ.

## ೨. ಗೋಕಾಕ ತಾಲೂಕಿನ ಜೈನ ಶಾಸನಗಳ ಸಾಂಸ್ಕೃತಿಕ ಮಹತ್ವ

ಗೋಕಾಕ ತಾಲೂಕಿನಲ್ಲಿ ಇದುವರೆಗೆ ಕೊಣ್ಣೂರದಲ್ಲಿ ನಾಲ್ಕು, ಕಲ್ಲೊಳೆಯಲ್ಲಿ ಒಂದು, ಕುಲಗೋಡದಲ್ಲಿ ಒಂದು, ಗೋಕಾಕದಲ್ಲಿ ಎರಡು ಮತ್ತು ಯಾದವಾಡದಲ್ಲಿ ಒಂದು ಹೀಗೆ ಒಟ್ಟು ಒಂಭತ್ತು ಜೈನ ಶಾಸನಗಳು ಬೆಳಕಿಗೆ ಬಂದಿವೆ. ಕೊಣ್ಣೂರಿನ ಜೈನ ವೀರಗಲ್ಲು, ನಿಷಿಧಿಗಲ್ಲು ಶಾಸನ, ಯಾದವಾಡದ ಪಾದಪೀಠ ಮತ್ತು ಕುಲಗೋಡದ ಶಾಸನಗಳನ್ನು ಹೊರತುಪಡಿಸಿ ಉಳಿದವುಗಳೆಲ್ಲವೂ ವಿವಿಧ ಶಾಸನ ಸಂಪುಟಗಳು ಮತ್ತು ನಿಯತ ಕಾಲಿಕೆಗಳಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನವು ಅತೀ ಪ್ರಾಚೀನವಾದದ್ದು. ಯಾದವಾಡದ ಕ್ರಿ. ಶ. ಸುಮಾರು ೧೬ನೆಯ ಶತಮಾನದ ಪಾದಪೀಠ ಶಾಸನವು ಇತ್ತೀಚಿನದ್ದು. ಗೋಕಾಕದ ತಾಮ್ರಪಟ ಶಾಸನವು ಕ್ರಿ. ಶ. ಸುಮಾರು ೬ನೆಯ ಶತಮಾನದ ಕನ್ನಡ ಲಿಪಿಯನ್ನು ಹೊಂದಿದೆ. ಈ ಶಾಸನದಲ್ಲಿ ಅಕ್ಷರಗಳಿಗೆ ಚಿಕ್ಕ ತಲೆಕಟ್ಟುಗಳಿರುವುದು ಗಮನಾರ್ಹ. ಕಲ್ಯಾಣದ ಚಾಳುಕ್ಯರು ಮತ್ತು ಸವದತ್ತಿ ರಟ್ಟರ ಕಾಲದ ಕೊಣ್ಣೂರು, ಕಲ್ಲೊಳೆಯ ಶಾಸನಗಳು ಕನ್ನಡ ಲಿಪಿಯಲ್ಲಿವೆ. ಗೋಕಾಕದ ತಾಮ್ರಪಟ ಶಾಸನ ಮತ್ತು ಸುಪಾರ್ಶ್ವನಾಥ ತೀರ್ಥಂಕರನ ಪಾದಪೀಠದ ಮೇಲಿರುವ ಶಾಸನಗಳು ಸಂಸ್ಕೃತ ಭಾಷೆಯಲ್ಲಿವೆ. ಉಳಿದೆಲ್ಲ ಶಾಸನಗಳು ಕನ್ನಡ ಭಾಷೆಯಲ್ಲಿವೆ. ಈ ಎಲ್ಲ ಶಾಸನಗಳಲ್ಲಿ ಉಲ್ಲೀಖಿತ ರಾಜಕೀಯ ಮತ್ತು ಆಡಳಿತ (ಇವುಗಳ ಕುರಿತು ಈಗಾಗಲೇ ಎರಡನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ), ಮಂತ್ರಿಗಳು ಮತ್ತು ಅಧಿಕಾರಿಗಳು, ಆಡಳಿತ ವಿಭಾಗಗಳು, ಮುನಿಗಳು ಮತ್ತು ಭಟ್ಟಾರಕರು, ಸಾಮಾಜಿಕ ಮತ್ತು ಆರ್ಥಿಕ ಅಂಶಗಳು, ಶಾಸನ ಸಾಹಿತ್ಯ, ಕವಿಗಳ ವಿವರಗಳು ಈ ಕೆಳಗಿನಂತಿವೆ.

### ೨.೧. ಮಂತ್ರಿಗಳು ಮತ್ತು ಅಧಿಕಾರಿಗಳು

ಸಾಮಾನ್ಯವಾಗಿ ಸಾಮ್ರಾಜ್ಯದ ಆಡಳಿತ ನಿರ್ವಹಣೆಯಲ್ಲಿ ಅರಸನಿಗೆ ಸಹಾಯಕರಾಗಿ ಅನೇಕ ಮಂತ್ರಿಗಳು ಮತ್ತು ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದರು. ಅಂತಹ ಕೆಲವು ಮಂತ್ರಿಗಳು ಮತ್ತು ಅಧಿಕಾರಿಗಳು ಗೋಕಾಕ ತಾಲೂಕಿನ ಜೈನ ಶಾಸನಗಳಲ್ಲಿ ಉಲ್ಲೀಖಿತರಾಗಿದ್ದಾರೆ. ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ದಂಡನಾಯಕ ಚಾಮುಂಡ, ಸೋರಿಗಾಂಕವಿಭು, ಬಲ್ಲಕಲ್ಲಗಾವುಂಡ, ಕಲಿದೇವ, ಬಲದೇವ, ಕನಕಿ, ಮಹಾಪ್ರಭು ನಿಧಿಯಮ ಗಾವುಂಡರ ಪ್ರಸ್ತಾಪಗಳಿವೆ.[3] ಇದೇ ಶಾಸನದಲ್ಲಿ ಮತ್ತು ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ತೆರಿಗೆ ಮತ್ತು ವಿವಿಧ ಸುಂಕಗಳ ಉಲ್ಲೇಖಗಳಿವೆ.[4] ಇದರಿಂದ ಈ ತಾಲ್ಲೂಕಿನಲ್ಲಿ ಸುಂಕಾಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದರೆಂದು ಸ್ಪಷ್ಟವಾಗುತ್ತದೆ. ಈ ಎಲ್ಲ ಅಧಿಕಾರಿಗಳು ಕೇವಲ ಆಡಳಿತದಲ್ಲಿ ಅಷ್ಟೇ ಅಲ್ಲದೆ ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿಯೂ ಭಾಗವಹಿಸಿ ಸಾಂಸ್ಕೃತಿಕ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಯುದ್ಧಗಳಲ್ಲಿ ದಂಡನಾಯಕನ ಪಾತ್ರ ಮಹತ್ವದ್ದಾಗಿತ್ತು. ಅದೇ ರೀತಿ ಆಡಳಿತ ವ್ಯವಸ್ಥೆಯಲ್ಲಿ ಪ್ರಧಾನಿಯ (ಮಹಾಪ್ರಭು) ಪಾತ್ರ ಮುಖ್ಯವಾಗಿತ್ತು. ತೆರಿಗೆ ವಸೂಲಿಯಲ್ಲಿ ಸುಂಕದ ಅಧಿಕಾರಿಯ ಕೆಲಸ ಪ್ರಮುಖವಾಗಿತ್ತು.

### ೨.೨. ಆಡಳಿತ ವಿಭಾಗಗಳು

ಅರಸು ಮನೆತನಗಳು ವಿಸ್ತಾರವಾಗಿದ್ದ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ರಾಜ್ಯ, ಮಂಡಲ, ವಿಷಯ, ದೇಶ, ನಾಡು, ಕಂಪಣ ಮೊದಲಾದ ಪ್ರಧಾನ ಮತ್ತು ಉಪ ಆಡಳಿತ ವಿಭಾಗಗಳಾಗಿ ವಿಂಗಡಿಸಿದ್ದವು. ಚಕ್ರವರ್ತಿಯೇ ಸಾಮ್ರಾಜ್ಯದ ಅಧಿಪತಿಯಾಗಿದ್ದನು. ಇವನು ಆಯಾ ಆಡಳಿತ ಪ್ರಾಂತಗಳಿಗೆ

ನಿಷ್ಠಾವಂತ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ಆರಂಭದಲ್ಲಿ ಇಂತಹ ಪ್ರಾಂತಗಳನ್ನು ರಾಜಮನೆತನದ ಹೆಸರಿನಲ್ಲಿ, ಕೇಂದ್ರ ಪಟ್ಟಣದ ಹೆಸರಿನಲ್ಲಿ ಮತ್ತು ಭೌಗೋಳಿಕ ಪರಿಸರದ ಸೂಚನೆಯಿಂದ ಗುರುತಿಸಲಾಗುತ್ತಿತ್ತು. ಕಾಲಾನುಕ್ರಮದಲ್ಲಿ ಈ ವಿಭಾಗಗಳ ಮುಂದೆ ಅಂಕಿಗಳನ್ನು ಬಳಸುವುದು ಪ್ರಾರಂಭವಾಯಿತು. ಈ ಅಂಕಿಗಳು ಆಯಾ ವಿಭಾಗದಲ್ಲಿದ್ದ ಗ್ರಾಮಗಳ ಸಂಖ್ಯೆಯನ್ನು ಸೂಚಿಸುತ್ತವೆ ಎಂಬುದಾಗಿ ಭಾವಿಸಲಾಗಿದೆ.[5] ಗೋಕಾಕ ತಾಲೂಕಿನ ಜೈನ ಶಾಸನಗಳಲ್ಲಿ ಉಲ್ಲೇಖಿತ ಆಡಳಿತ ವಿಭಾಗಗಳು ಈ ಕೆಳಗಿನಂತಿವೆ.

### ೨.೨.೧. ಕುಹೂಂಡಿ-೩೦೦೦

ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಕುಹೂಂಡಿ-೩೦೦೦ ಪ್ರಾಂತದ ಉಲ್ಲೇಖವಿದೆ.[6] ಮೂರು ಸಾವಿರ ಗ್ರಾಮಗಳನ್ನು ಒಳಗೊಂಡಿದ್ದ ಈ ಪ್ರಾಂತವು ಕುಂತಳನಾಡಿನ ಒಂದು ಪ್ರಮುಖ ಆಡಳಿತ ವಿಭಾಗವಾಗಿತ್ತು. ಇದು ಬೆಳಗಾವಿ ಜಿಲ್ಲೆಯ ಖಾನಾಪುರ ಮತ್ತು ಅಥಣಿ ತಾಲೂಕುಗಳನ್ನು ಹಾಗೂ ಬೈಲಹೊಂಗಲ ಮತ್ತು ಸವದತ್ತಿ ತಾಲೂಕುಗಳ ದಕ್ಷಿಣ ಭಾಗಗಳನ್ನು ಹೊರತುಪಡಿಸಿ, ಮಹಾರಾಷ್ಟ್ರದ ಚಂದಗಡ ಮತ್ತು ಗಡಹಿಂಗ್ಲಜ ತಾಲೂಕುಗಳು, ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕನ್ನು ಒಳಗೊಂಡಂತೆ ಬೆಳಗಾವಿ ಜಿಲ್ಲೆಯ ಪ್ರದೇಶದಲ್ಲಿ ವ್ಯಾಪಿಸಿತ್ತು.[7] ಇಂದಿನ ಚಿಕ್ಕೋಡಿ ತಾಲೂಕಿನ ಪಟ್ಟಣಕೋಡಿ ಗ್ರಾಮವು ಈ ಪ್ರಾಂತದ ಕೇಂದ್ರ ಪಟ್ಟಣವಾಗಿತ್ತು.[8] ಪಟ್ಟಣ ಎಂದರೆ ಸಂತೆ ನೆರೆಯುವ ಸ್ಥಳ ಮತ್ತು ಅಲ್ಲಿ ವ್ಯಾಪಾರ ಮಾಡುವವರು ಪಟ್ಟಣಸೆಟ್ಟಿಯರು ಎಂದು ಕರೆಸಿಕೊಳ್ಳುತ್ತಾರೆ. ರಾಜಧಾನಿ ಅಥವಾ ಪ್ರಾಂತಗಳ ಕೇಂದ್ರಕ್ಕೆ ಪಟ್ಟಣ ಎಂದು ಕರೆಯುತ್ತಿದ್ದರು. ಪಟ್ಟಣ ಕುಹುಂಡಿ ಅರ್ಥಾತ್ ರಾಜಧಾನಿ ಕುಹುಂಡಿಯೇ ಪಟ್ಟಣಕೋಡಿ ಎಂಬ ನಿರ್ಣಯಕ್ಕೆ ಬರಬಹುದು. ಪಟ್ಟಣಕೋಡಿ ಎಂಬ ಹೆಸರನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ಗಮನಿಸಿದಾಗ ಕುಹುಂಡಿ > ಕೂಂಡಿ > ಕೂಡಿ > ಕುಡಿ > ಕೋಡಿಯಾಗಿರುವ ಸಾಧ್ಯತೆಗಳಿವೆ. ಕುಹುಂಡಿ ಎಂಬುದನ್ನು ಕುಪ್ಪೆ + ಗುಂಡಿ > ಕುಪ್ಪಗುಂಡಿ > ಕುಹುಂಡಿ ಅಥವಾ ಕುಪ್ಪೆ + ಹುಂಡಿ > ಕುಪ್ಪಹುಂಡಿ > ಕುಹುಂಡಿ ಎಂದು ನಿಸರ್ಗವಾಚಿಯಾಗಿ ಬಿಡಿಸಬಹುದು. ಕುಪ್ಪಯನ + ಗುಂಡಿ > ಕುಪ್ಪಗುಂಡಿ > ಕುಹುಂಡಿ ಅಥವಾ ಕುಪ್ಪಯನ + ಹುಂಡಿ > ಕುಪ್ಪಹುಂಡಿ > ಕುಹುಂಡಿ ಎಂದು ವ್ಯಕ್ತಿವಾಚಿಯಾಗಿ ಬಿಡಿಸಬಹುದು. ಕ್ರಿ. ಶ. ಸುಮಾರು ೬ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೂ ಅಸ್ತಿತ್ವದಲ್ಲಿದ್ದ ಈ ಪ್ರಾಂತವು ಮಳಖೇಡದ ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಸವದತ್ತಿ ರಟ್ಟ ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು.

### ೨.೨.೨. ಹಗರಟಗೆ ನಾಡು

ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಹಗರಟಗೆ ನಾಡಿನ ಉಲ್ಲೇಖವಿದೆ.[9] ಈ ಪ್ರಾಂತವು ಕುಂತಳನಾಡಿನ ಒಂದು ಪ್ರಮುಖ ಆಡಳಿತ ವಿಭಾಗವಾಗಿತ್ತು. ಇದು ಕಲ್ಯಾಣದ ಚಾಳುಕ್ಯರು, ಕಲಚುರಿಗಳು, ದೇವಗಿರಿಯ ಸೇವುಣರು ಮತ್ತು ಇವರ ಮಹಾಮಂಡಳೇಶ್ವರರ ಆಡಳಿತಕ್ಕೆ ಒಳಪಟ್ಟಿತ್ತು. ಇಂದಿನ ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ನೈರುತ್ಯ ಭಾಗ, ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಉತ್ತರ ಭಾಗ, ಸಿಂದಗಿ ತಾಲೂಕಿನ ದಕ್ಷಿಣ ಭಾಗಗಳ ಭೂಪ್ರದೇಶದಲ್ಲಿ ವ್ಯಾಪಿಸಿದ್ದ ಈ ಪ್ರಾಂತದಲ್ಲಿ ಮುನ್ನೂರು ಗ್ರಾಮಗಳಿದ್ದವು. ಪಗಲಟ್ಟಿ-೩೦೦, ಪಗಲಟ್ಟಿ, ಪಗರಿಟೆ ನಾಡು, ಪಗಲಟಿ ವಿಶಯ, ಹಗಲ್ಲಿಟ್ಟಗೆ-೩೦೦, ಹಗರಟ್ಟಿಗೆ ನಾಡು, ಹಗರಟ್ಟಗೆ ನಾಡು, ಹಗರಟ್ಟಗೆ ಮುನ್ನೂಱು, ಹಗರಿಟ್ಟಗೆ-೩೦೦, ಹಗಟ್ಟೆ ಮುನ್ನೂಱು, ಹಗರಿಟ್ಟಿಗೆ ಮುನ್ನೂಱು, ಹಗರಿಟೆ

ನಾಡು, ಹಗರಿಟಗೆ, ಹಗರಟಗೆ ಮುಂನ್ನೂಱು, ಹಗರಟ್ಟಿಗೆ ಎಂದಿತ್ಯಾದಿಯಾಗಿ ಸಮಕಾಲೀನ ಶಾಸನಗಳಲ್ಲಿ ಕರೆಯಲ್ಪಟ್ಟಿರುವ ಈ ಪ್ರಾಂತವು ಕ್ರಿ. ಶ. ಸುಮಾರು ೧೧ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೂ ಪ್ರಮುಖ ಪ್ರಾಂತವಾಗಿ ಮೆರೆದಿದೆ. ಇಂದಿನ ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ಹಗರಟಗಿ ಗ್ರಾಮವು ಈ ಪ್ರಾಂತದ ಕೇಂದ್ರ ಪಟ್ಟಣವಾಗಿತ್ತು.[10]

### ೨.೨.೩. ಕುರುಂಬೆಟ್ಟ ಕಂಪಣ

ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಕುರುಂಬೆಟ್ಟ ಕಂಪಣದ ಉಲ್ಲೇಖವಿದೆ.[11] ಈ ಕಂಪಣವು ಕುಹೂಂಡಿ- ೩೦೦೦ ಪ್ರಾಂತದ ಉಪ ಪ್ರಾಂತವಾಗಿತ್ತು. ಕಲ್ಲೊಳೆ ಗ್ರಾಮವನ್ನು ಒಳಗೊಂಡಂತೆ ಸುತ್ತಮುತ್ತಲಿನ ಕೆಲವು ಗ್ರಾಮಗಳು ಈ ಪ್ರಾಂತದಲ್ಲಿದ್ದವು. ಗೋಕಾಕ ತಾಲೂಕಿನ ಇಂದಿನ ಶಿಂದಿಕುರಬೆಟ್ಟ ಗ್ರಾಮವು ಈ ಪ್ರಾಂತದ ಕೇಂದ್ರ ಪಟ್ಟಣವಾಗಿತ್ತು.

## ೨.೩. ಮುನಿಗಳು ಮತ್ತು ಭಟ್ಟಾರಕರು

ಗೋಕಾಕ ತಾಲೂಕಿನಲ್ಲಿ ವಿವಿಧ ಸಂಘ, ಗಣ, ಗಚ್ಛ, ಅನ್ವಯ, ಬಳಿ ಪರಂಪರೆಗಳಿಗೆ ಸಂಬಂಧಿಸಿದ ಕೆಲವು ಮುನಿಗಳು ಜೈನ ಧರ್ಮದ ಪುನರುಜ್ಜೀವನ ಮತ್ತು ಪ್ರಚಾರ ಕಾರ್ಯದಲ್ಲಿ ತೊಡಗಿ ಶ್ರಾವಕ ಸಮುದಾಯವನ್ನು ಜಾಗೃತಗೊಳಿಸಿದ್ದಾರೆ. ಆ ಮುನಿಗಳು ಕೈಗೊಂಡ ಘೋರವಾದ ತಪಶ್ಚರ್ಯ, ಧರ್ಮಪ್ರಚಾರ, ವ್ರತಗಳ ಪಾಲನೆ ಮತ್ತು ಜೈನಾಗಮಗಳಲ್ಲಿ ಅವರಿಗಿದ್ದ ನಿಷ್ಠೆ, ಪಾಂಡಿತ್ಯ ಮತ್ತು ವಿದ್ವತ್ತು, ಸಮಕಾಲೀನ ಸಮಾಜದಲ್ಲಿ ಅವರಿಗಿದ್ದ ಸ್ಥಾನ, ಮಾನ, ಗೌರವ ಮೊದಲಾದ ವಿವರಗಳನ್ನು ಗೋಕಾಕ ತಾಲೂಕಿನ ಜೈನ ಶಾಸನಗಳು ಬಹು ಮಾರ್ಮಿಕವಾಗಿ ವರ್ಣಿಸಿವೆ. ಈ ತಾಲೂಕಿನಲ್ಲಿ ಧರ್ಮ ಪ್ರಸಾರವನ್ನು ಕೈಗೊಂಡ ಮುನಿಗಳ ವಿವರಗಳು ಈ ಕೆಳಗಿನಂತಿವೆ.

### ೨.೩.೧. ಭದ್ರಬಾಹು ಭಟ್ಟಾರಕ

ಕ್ರಿ. ಪೂ. ಸುಮಾರು ೪ನೆಯ ಶತಮಾನದಲ್ಲಿ ಅಂತಿಮ ಶ್ರುತಕೇವಲಿ ಭದ್ರಬಾಹು ಭಟ್ಟಾರಕರು ಮತ್ತು ಅವರ ಪ್ರಧಾನ ಶಿಷ್ಯ ನಂದ ಮನೆತನದ ಚಂದ್ರಗುಪ್ತ ಪಾಟಲೀಪುತ್ರದಿಂದ ಶ್ರವಣಬೆಳಗೊಳಕ್ಕೆ ವಿಹಾರ ಬೆಳೆಸಿದ್ದ ಸಂದರ್ಭದಲ್ಲಿ ಗೋಕಾಕ ತಾಲೂಕಿನ ಕೊಣ್ಣೂರದ ಪರಿಸರದಲ್ಲಿರುವ ಗುಂಫಾಗಳಲ್ಲಿ ತಪಸ್ಸು ಗೈದರೆಂದು ಪ್ರತೀತಿಯಿದೆ.[12] ಆದರೆ ವಾಸ್ತವವಾಗಿ ಈ ಗುಂಫಾಗಳು ಬೃಹತ್ ಶಿಲಾ ಸಮಾಧಿಯುಗದ ಕಿಂಡಿಕೋಣೆ ಪ್ರಕಾರದ ಗೋರಿಗಳಾಗಿವೆ. ಅ. ಸುಂದರ ಅವರು ಈ ಶಿಲಾಗೋರಿಗಳ ಕಾಲಮಾನವನ್ನು ಕ್ರಿ. ಪೂ. ಸುಮಾರು ೧೨೦೦ ರಿಂದ ೭೦೦ರ ವರೆಗೆ ಎಂದು ಗುರುತಿಸಿದ್ದಾರೆ.

### ೨.೩.೨. ಆರ್ಯನಂದಿ ಆಚಾರ್ಯ

ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಜಂಬೂಖಂಡಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಪ್ರಾಚೀನ ರಾಷ್ಟ್ರಕೂಟ ಮನೆತನದ ದೇಜ್ಜಮಹಾರಾಜನ ಪುತ್ರ ಇಂದ್ರನಂದಾದಿ ರಾಜನು ತನ್ನ ಹಾಗೂ ತನ್ನ ಪೂರ್ವಜರ ಪುಣ್ಯಗೊಸ್ಕರ ಕಷ್ಮಾಂಡಿ ವಿಷಯದಲ್ಲಿದ್ದ ಜಳಾರ ಗ್ರಾಮದಲ್ಲಿ ಅರಹಂತ ತೀರ್ಥಂಕರನ ಪೂಜೆಗೆ, ಶಿಕ್ಷಕರಿಗೆ, ರೋಗಿಗಳಿಗೆ, ವೃದ್ಧರಿಗೆ ಮತ್ತು ತಪಸ್ವಿಗಳಿಗೆ ಈ ಮುನಿಯ ಸನ್ನಿಧಿಯಲ್ಲಿ ಐವತ್ತು ನಿವರ್ತನ ಭೂಮಿಯನ್ನು ದಾನ ಮಾಡಿದ್ದಾನೆ.[13]

## ೨.೩.೩. ಗುಣಚಂದ್ರ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಪ್ರಸ್ತುತ ಶಾಸನವು ಈ ಮುನಿಗಳು ಬಲತ್ಕಾರಗಣ ಎಂಬ ಸರೋವರದಲ್ಲಿ ಹಂಸ ಪಕ್ಷಿಯಂತೆ ಶೋಭಿಸುತ್ತಿದ್ದರೆಂದೂ, ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ, ಸಮ್ಯಗ್ ಚಾರಿತ್ರ್ಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರೆಂದೂ, ಮುನಿಗಣದಲ್ಲಿ ಹುಣ್ಣಿಮೆಯ ಚಂದ್ರನಂತೆ ಶೋಭಿಸುತ್ತಿದ್ದರೆಂದೂ, ಸ್ವಭಾವದಲ್ಲಿ ಶಾಂತರೂ, ಗುಣದಲ್ಲಿ ಶ್ರೇಷ್ಠರೂ, ಜೈನ ಧರ್ಮದ ಏಳ್ಗೆಗಾಗಿ ಶ್ರಮಿಸುವವರೂ ಆಗಿದ್ದರೆಂದು ವರ್ಣಿಸಿದೆ.[14]

## ೨.೩.೪. ನಯನಂದಿ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ಗುಣಚಂದ್ರ ಮುನಿಯ ಶಿಷ್ಯರು. ಪ್ರಸ್ತುತ ಶಾಸನವು ಈ ಮುನಿಗಳು ಹದಿನೈದು ದಿನಗಳವರೆಗೆ ಉಪವಾಸ ಕೈಗೊಳ್ಳುತ್ತಿದ್ದರೆಂದೂ, ಇವರ ಪಾದಗಳು ಮಧುರವಾಗಿದ್ದವೆಂದೂ, ಇವರು ಶೀಲವಂತರಾಗಿದ್ದರೆಂದೂ, ಜನಸಾಮಾನ್ಯರನ್ನು ರಕ್ಷಿಸುವ ಶಕ್ತಿ ಹೊಂದಿದ್ದರೆಂದೂ, ಧರ್ಮಜ್ಞಾನ ಪಾರಂಗತರಾಗಿದ್ದರೆಂದೂ ವರ್ಣಿಸಿದೆ.[15]

## ೨.೩.೫. ಶ್ರೀಧರಾಚಾರ್ಯ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ನಯನಂದಿ ಮುನಿಯ ಶಿಷ್ಯರು. ಪ್ರಸ್ತುತ ಶಾಸನವು ಈ ಮುನಿಗಳು ಅನೇಕ ವಿದ್ಯೆಗಳಲ್ಲಿ ಪರಿಣಿತರಾಗಿದ್ದರೆಂದು ವರ್ಣಿಸಿದೆ. ಇವರು ಮುನಿಗಣದಲ್ಲಿ ಪ್ರಮುಖರಾಗಿದ್ದರಲ್ಲದೆ, ಆಚಾರ್ಯ ಪದವಿಯಲ್ಲಿದ್ದರು. ಸವದತ್ತಿ ರಟ್ಟ ಮನೆತನದ ಇಮ್ಮಡಿ ಕನ್ನಕೈರನು ಕೊಣ್ಣೂರಿನಲ್ಲಿ ಮಹಾಪ್ರಭು ನಿಧಿಯಮ ಗಾವುಂಡನು ನಿರ್ಮಿಸಿದ್ದ ಬಸದಿಯ ಜೀರ್ಣೋದ್ಧಾರಕ್ಕಾಗಿ ಈ ಮುನಿಗಳ ಸನ್ನಿಧಿಯಲ್ಲಿ ಭೂದಾನ ಮಾಡಿದ್ದಾನೆ.[16]

## ೨.೩.೬. ಚಂದ್ರಕೀರ್ತಿ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ಶ್ರೀಧರಾಚಾರ್ಯರ ಶಿಷ್ಯರು. ಪ್ರಸ್ತುತ ಶಾಸನವು ಈ ಮುನಿಗಳು ಸನ್ಮಾರ್ಗಿಗಳೂ, ಮಿಥ್ಯಾಕಥೆಗಳನ್ನು ಬಿಂಬಿಸಿದವರೂ, ಚಂದ್ರನಂತೆ ಕೀರ್ತಿವುಳ್ಳವರೂ, ಸರ್ವರಿಂದ ಪೂಜಿತರಾಗಿದ್ದರೆಂದೂ ವರ್ಣಿಸಿದೆ.[17] ಖಾನಾಪುರ ತಾಲೂಕಿನ ಗೋಲಿಹಳ್ಳಿಯ ಕ್ರಿ. ಶ. ೧೧೭೬ರ ಶಾಸನದಲ್ಲಿ ಪ್ರಸ್ತಾಪಿತ ಚಂದ್ರಕೀರ್ತಿ ಮುನಿ ಪ್ರಸ್ತುತ ಮುನಿಯೇ ಆಗಿರಬಹುದು.[18]

## ೨.೩.೭. ನೇಮಿಚಂದ್ರ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ಚಂದ್ರಕೀರ್ತಿ ಮುನಿಯ ಶಿಷ್ಯರು. ಪ್ರಸ್ತುತ ಶಾಸನವು ಈ ಮುನಿಗಳು ಚಾರಿತ್ರ್ಯವಂತರೂ, ಭೂಮಿಪತಿಗಳೂ, ಕಿರೀಟಪ್ರಾಯರೂ, ಚಂದ್ರನ ಕಿರಣದಂತೆ ಶಾಂತರೂ ಆಗಿದ್ದರೆಂದು ವರ್ಣಿಸಿದೆ.[19]

### ೨.೩.೮. ಶ್ರೀಧರ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಈ ಮೇಲಿನ ಚಂದ್ರಕೀರ್ತಿ ಮುನಿಯ ಪುತ್ರರಾದ ಇವರು ನೇಮಿಚಂದ್ರ ಮುನಿಯ ಶಿಷ್ಯರಾಗಿದ್ದರು. ಪ್ರಸ್ತುತ ಶಾಸನವು ಈ ಮುನಿಗಳು ಮಹಾವಾಗ್ಮಿಗಳೂ, ಅಪಾರ ಶಬ್ದಭಂಡಾರ ಉಳ್ಳವರೂ ಆಗಿದ್ದರೆಂದು ವರ್ಣಿಸಿದೆ. ಇವರು ಸ್ಥಳೀಯ ಮಹಾಪ್ರಭು ನಿಧಿಯಮ ಗಾವುಂಡನ ಗುರುಗಳಾಗಿದ್ದರು.[20] ಹುಕ್ಕೇರಿ ತಾಲೂಕಿನ ಉಳ್ಳಾಗಡ್ಡಿ ಖಾನಾಪುರದ ಕ್ರಿ. ಶ. ೧೧೭೬ರ, ಖಾನಾಪುರ ತಾಲೂಕಿನ ಗೋಲಿಹಳ್ಳಿಯ ಕ್ರಿ. ಶ.೧೧೭೬ರ, ಬೈಲಹೊಂಗಲ ತಾಲೂಕಿನ ಹಣ್ಣಿಕೇರಿಯ ಕ್ರಿ. ಶ. ೧೨೦೮ರ, ಸವದತ್ತಿ ತಾಲೂಕಿನ ಬಾಡ್ಲಿಯ ಕ್ರಿ. ಶ. ೧೨೯೯ರ ಮತ್ತು ಹೂಲಿಯ ಕ್ರಿ. ಶ. ಸುಮಾರು ೧೩ನೆಯ ಶತಮಾನದ ಶಾಸನಗಳಲ್ಲಿ ಉಲ್ಲೇಖಿತ ಶ್ರೀಧರ ಮುನಿ ಪ್ರಸ್ತುತ ಮುನಿಯೇ ಆಗಿರಬಹುದು.[21]

### ೨.೩.೯. ಧರಸೇನ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ಶ್ರೀಧರ ಮುನಿಯ ಶಿಷ್ಯರು. ಪ್ರಸ್ತುತ ಶಾಸನವು ಈ ಮುನಿಗಳನ್ನು ಅತಿಚತುರಕವಿ ಎಂದು ವರ್ಣಿಸಿದೆ.[22]

### ೨.೩.೧೦. ವಾಸುಪೂಜ್ಯ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಈ ಮುನಿಗಳು ಮೂರು ವಿದ್ಯೆಗಳಲ್ಲಿ ಪ್ರವೀಣರೂ, ಪರಿಣಿತರೂ, ಜನರ ಮುಖವನ್ನು ನೋಡಿ ಅವರ ಹಿಂದಿನ ಜನ್ಮದ ವೃತ್ತಾಂತವನ್ನು ಹೇಳುವವರೂ, ಧರ್ಮದ ವಿಷಯದಲ್ಲಿ ಪ್ರತಿವಾದಿಗಳನ್ನು ಸೋಲಿಸುವವರೂ, ಲಾವಣ್ಯವಂತರೂ ಆಗಿ ಭೂಮಿಯಲ್ಲಿ ಪ್ರಸಿದ್ಧರಾಗಿದ್ದರು. ಇವರು ಮಲೆಯಾಳ ದೇಶದಿಂದ ಆಗಮಿಸಿದ್ದ ಬೌದ್ಧ ಧರ್ಮದ ಸನ್ಯಾಸಿಯನ್ನು ವಾದದಲ್ಲಿ ಸೋಲಿಸಿದ್ದರು.[23] ಖಾನಾಪುರ ತಾಲೂಕಿನ ಗೋಲಿಹಳ್ಳಿಯ ಕ್ರಿ. ಶ.೧೧೭೬ರ ಶಾಸನದಲ್ಲಿ ಪ್ರಸ್ತಾಪಿತ ವಾಸುಪೂಜ್ಯ ಮುನಿ ಪ್ರಸ್ತುತ ಮುನಿಯೇ ಆಗಿರಬಹುದು.[24] ಪಾರ್ಶ್ವಪಂಡಿತ ಕವಿಯು ಪಾರ್ಶ್ವನಾಥ ಪುರಾಣದ ಪ್ರಾರಂಭದಲ್ಲಿ ತನ್ನ ಗುರುಗಳಾಗಿದ್ದ ಈ ಮುನಿಗಳು _

ಭಾವತಪದಿಂದೆಬೆದಱಿಸಿ |
ಭಾವಜನಂ ಪರಮಸಂಯಮೋಪಾಯಮನು ||
ಜೀವಿಸಿದ ವಾಸುಪೂಜ್ಯ |
ತ್ರೈವಿದ್ಯಪದಂಗಳಲ್ತೆ ತೋಕನುತಂಗಳ್ ||

ಎಂದು ಭಾವತಪಸ್ಸಿನಿಂದ ಭಾವಜನನ್ನು (ಮನ್ಮಥ) ಭಯಪಡಿಸಿ ಓಡಿಸಿ ಪರತಪಸ್ಸಿಗೆ ದಾರಿಯನ್ನು ವೃದ್ಧಿಗೊಳಿಸಿಕೊಂಡಿದ್ದರು. ಇವರ ಪಾದಗಳು ಲೋಕಖ್ಯಾತಿ ಹೊಂದಿವೆ ಎಂದು ವರ್ಣಸಿದ್ದಾನೆ.[25]

### ೨.೩.೧೧. ಶ್ರುತಕೀರ್ತಿ ಮುನಿ

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ವಾಸುಪೂಜ್ಯ ಮುನಿಯ ಪುತ್ರರು ಮತ್ತು ಶಿಷ್ಯರಾಗಿದ್ದರು.

ಪ್ರಸ್ತುತ ಶಾಸನವು ಈ ಮುನಿಗಳು ಮಾತನಾಡಿದರೆ ಬೆಳದಿಂಗಳು ಹರಡಿದಂತಾಗುತ್ತಿತ್ತು ಎಂದು ವರ್ಣಿಸಿದೆ.[26] ಖಾನಾಪುರ ತಾಲೂಕಿನ ಗೋಲಿಹಳ್ಳಿಯ ಕ್ರಿ. ಶ.೧೧೭೬ರ ಶಾಸನದಲ್ಲಿ ಪ್ರಸ್ತಾಪಿತ ಶ್ರುತಕೀರ್ತಿ ಮುನಿ ಪ್ರಸ್ತುತ ಮುನಿಯೇ ಆಗಿರಬಹುದು.[27] ಪಾರ್ಶ್ವಪಂಡಿತ ಕವಿಯು ಪಾರ್ಶ್ವನಾಥ ಪುರಾಣದ ಪ್ರಾರಂಭದಲ್ಲಿ _

ಏವೊಗವಟ್ಟಿವಾಸುಪೂಜ್ಯ |
ತ್ರೈವಿದ್ಯರ ವಿದ್ಯೆಯೇಟ್ಟಿಯಂ ಶ್ರುತಕೀರ್ತಿ ||
ತ್ರೈವಿದ್ಯಾರ್ ಸಕಳಕಳಾ |
ಕೋವಿದರೆನೆನೆಗಟ್ದುಗುಣಿಗಳವರ್ಗಗಳ ಶಿಷ್ಯರ್ ||

ಎಂದು ವಾಸುಪೂಜ್ಯ ಮುನಿಯ ಶಿಷ್ಯರಾಗಿದ್ದ ಶ್ರುತಕೀರ್ತಿ ಮುನಿಗಳು ಸಕಲ ವಿದ್ಯಾಪಾರಂಗತರೂ ಸಕಲಸದ್ಗುಣಶಾಲಿಗಳೂ ಆಗಿ ವಿದ್ಯಾ ಪ್ರೌಢಿಮೆಯನ್ನು ಹೊಂದಿದ್ದರು ಎಂದು ವರ್ಣಿಸಿದ್ದಾನೆ.[28]

**೨.೩.೧೨. ಪದ್ಮಪ್ರಭ ಮುನಿ**

ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ಬಲತ್ಕಾರಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ವಾಸುಪೂಜ್ಯ ಮುನಿಯ ಪುತ್ರರು ಮತ್ತು ಶಿಷ್ಯರಾಗಿದ್ದರು. ಪ್ರಸ್ತುತ ಶಾಸನವು ಈ ಮುನಿಗಳನ್ನು ಅತಿಚತುರಕವಿ ಕದಂಬಕನುತಪ್ಪದ್ಮಪ್ರಭ ಎಂದು ವರ್ಣಿಸಿದೆ.[29] ಪ್ರಾಯಶಃ ಈ ಮುನಿಗಳು ಜೈನಾಗಮಗಳನ್ನು ರಚಿಸಿರಬಹುದಾದ ಕಾರಣ ಇವರಿಗೆ ಅತಿಚತುರಕವಿ ಎಂಬ ಬಿರುದಿದ್ದಂತೆ ತೋರುತ್ತದೆ. ಖಾನಾಪುರ ತಾಲೂಕಿನ ಗೋಲಿಹಳ್ಳಿಯ ಕ್ರಿ. ಶ.೧೧೭೬ರ ಶಾಸನದಲ್ಲಿ ಪ್ರಸ್ತಾಪಿತ ಪದ್ಮಪ್ರಭ ಮುನಿ ಪ್ರಸ್ತುತ ಮುನಿಯೇ ಆಗಿರಬಹುದು.[30]

**೨.೩.೧೩. ಕುಮಾರಸೇನ ಮುನಿ**

ಕೊಣ್ಣೂರದ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾದಪೀಠ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘ ಪರಂಪರೆಗೆ ಸಂಬಂಧಿಸಿದ್ದಾರೆ.[31] ಇವರ ಕುರಿತು ಹೆಚ್ಚಿನ ವಿವರಗಳು ಲಭ್ಯವಿಲ್ಲ.

**೨.೩.೧೪. ನಾಗಸೇನ ಮುನಿ**

ಕೊಣ್ಣೂರದ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾದಪೀಠ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ಕುಮಾರಸೇನ ಮುನಿಯ ಶಿಷ್ಯರಾಗಿದ್ದರು.[32] ಇವರ ಕುರಿತು ಹೆಚ್ಚಿನ ವಿವರಗಳು ಲಭ್ಯವಿಲ್ಲ.

**೨.೩.೧೫. ರವಿಚಂದ್ರ ಮುನಿ**

ಗೋಕಾಕದ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾದಪೀಠ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಕಾರೆಯಗಣ ಪರಂಪರೆಗೆ ಸಂಬಂಧಿಸಿದ್ದಾರೆ. ಇವರ ಶಿಷ್ಯ ಸವದತ್ತಿ ರಟ್ಟ ಮನೆತನದ ಎರಗನು ಗೋಕಾಕದಲ್ಲಿ ಸುಪಾರ್ಶ್ವನಾಥ (?) ಬಸದಿಯನ್ನು ಮಾಡಿಸಿದ್ದಾನೆ.[33] ಈ ಮುನಿಗಳ ಕುರಿತು ಹೆಚ್ಚಿನ ವಿವರಗಳು ಲಭ್ಯವಿಲ್ಲ.

**೨.೩.೧೬. ಮಲಧಾರಿ ಮುನಿ**

ಕಲ್ಲೊಳೆಯ ಕ್ರಿ. ಶ. ೧೨೦೮ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ದೇಸಿಯಗಣದ ಪುಸ್ತಕಗಚ್ಛದ ಹನಸೋಗೆಬಳಿ ಪರಂಪರೆಗೆ ಸಂಬಂಧಿಸಿದ್ದಾರೆ. ಪ್ರಸ್ತುತ ಶಾಸನವು ಈ ಮುನಿಗಳು ಗುರುಕುಲ

ತಿಳಕಪ್ರಾಯರೂ, ಚಾರಿತ್ರ್ಯವಂತರೂ, ವಿಷಮವಿಷಯಗಳಿಗೆ ರಾಮಬಾಣರೂ, ಮೋಹಕ್ಕೆ ಅಂಕುಶರೂ, ಮಂತ್ರದಿಂದ ಮಂಗಲಕರರೂ, ಔಷಧ ಜ್ಞಾನವುಳ್ಳವರೂ, ಉತ್ತಮ ತಪಸ್ವಿಗಳೂ ಆಗಿದ್ದರೆಂದು ವರ್ಣಿಸಿದೆ.[34] ಬೆಳಗಾವಿಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಈ ಮುನಿಗಳ ಪ್ರಸ್ತಾಪವಿದೆ.[35]

**೨.೩.೧೭. ನೇಮಿಚಂದ್ರ ಮುನಿ**

ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ದೇಸಿಯಗಣದ ಪುಸ್ತಕಗಚ್ಛದ ಹನಸೋಗೆಬಳಿ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ಮಲಧಾರಿ ಮುನಿಯ ಅಗ್ರ ಶಿಷ್ಯರಾಗಿದ್ದರು. ಪ್ರಸ್ತುತ ಶಾಸನವು ಈ ಮುನಿಗಳು ಶಾಂತರೂ, ಧರ್ಮಜ್ಞಾನವುಳ್ಳವರೂ, ಶ್ರುತಜ್ಞಾನವಂತರೂ, ಸಕಲಶಾಸ್ತ್ರ ಪಾರಂಗತರೂ, ಒಳ್ಳೆಯ ಚಾರಿತ್ರ್ಯವಂತರೂ ಆಗಿದ್ದರೆಂದು ವರ್ಣಿಸಿದೆ.[36] ಖಾನಾಪುರ ತಾಲೂಕಿನ ಗೋಲಿಹಳ್ಳಿಯ ಕ್ರಿ. ಶ.೧೧೭೬ರ ಮತ್ತು ಬೆಳಗಾವಿಯ ಕ್ರಿ. ಶ. ೧೨೦೪ರ ಶಾಸನಗಳಲ್ಲಿ ಈ ಮುನಿಗಳ ನಿರೂಪಣೆಗಳಿವೆ.[37] ಪಾರ್ಶ್ವಪಂಡಿತ ಕವಿಯು ಪಾರ್ಶ್ವನಾಥ ಪುರಾಣದ ಪ್ರಾರಂಭದಲ್ಲಿ _

ಶ್ರೀ ಶಾರದೇಂದು ಕೈರವ |
ಕಾಶಸಮುತ್ಫುಲ್ಲ ಮಲ್ಲಿಕಾಸಂಕುಳಸಂ ||
ಕಾಶವಿಶುದ್ಧಯಶೋಗಂ |
ಗೇಶಂ ಶ್ರೀನೇಮಿಚಂದ್ರ ಸೈದ್ಧಾಂತೇಶ ||

ಎಂದು ನೇಮಿಚಂದ್ರ ಸೈದ್ಧಾಂತೇಶ ಮುನಿಗಳು ಶರತ್ಕಾಲದ ಚಂದ್ರ, ನೈದಿಲೆ, ಕಾಗಿದಬ್ಬೆಹೂವು, ಅರಳಿದ ಮಲ್ಲಿಗೆಯ ಹೂಗೊಂಚಲುಗಳಂತೆ ಶುಭ್ರವಾದ ಯಶಸ್ಸೆಂಬ ಗಂಗೆಗೆ ಒಡೆಯನಂತಿದ್ದರೆಂದು ವರ್ಣಿಸಿದ್ದಾನೆ.[38]

**೨.೩.೧೮. ಶುಭಚಂದ್ರ ಭಟ್ಟಾರಕ**

ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಉಲ್ಲೇಖಿತ ಈ ಮುನಿಗಳು ಮೂಲಸಂಘದ ದೇಸಿಯಗಣದ ಪುಸ್ತಕಗಚ್ಛದ ಹನಸೋಗೆಬಳಿ ಪರಂಪರೆಗೆ ಸಂಬಂಧಿಸಿದ್ದಾರೆ. ಇವರು ಈ ಮೇಲಿನ ನೇಮಿಚಂದ್ರ ಮುನಿಯ ಶಿಷ್ಯರು. ಪ್ರಸ್ತುತ ಶಾಸನವು ಈ ಮುನಿಗಳು ಉತ್ತಮ ಚಾರಿತ್ರ್ಯವಂತರೂ, ಸೂರ್ಯನಂತೆ ಪ್ರಭಾವಿಗಳೂ, ಸ್ವಗುಣದಲ್ಲಿ ಸತ್ಯವಂತರೂ, ಚಂದ್ರಿಕಾ ಶುದ್ಧಿಯಿಂದ ದಿಗಂಬರ ಕುಲ(ಪಂಥ)ವನ್ನು ವೃದ್ಧಿಸುವವರೂ, ರಾಜನಿಂದ ಪೂಜಿತರೂ ಆಗಿದ್ದರೆಂದು ವರ್ಣಿಸಿದೆ. ಈ ಮುನಿಗಳು ಕಲ್ಹೊಳೆಯ ಶಾಂತಿನಾಥ ಬಸದಿಯ ಸ್ಥಾನಾಚಾರ್ಯರಾಗಿದ್ದರು. ಸವದತ್ತಿ ರಟ್ಟ ಮನೆತನದ ಆನೆಯ ಕಾರ್ತವೀರ್ಯನು ಪ್ರಸ್ತುತ ಬಸದಿಯ ಪೂಜೆ, ಜೀರ್ಣೋದ್ಧಾರ, ಮುನಿಗಳ ಆಹಾರದಾನ ಮೊದಲಾದವುಗಳಿಗಾಗಿ ಈ ಮುನಿಗಳ ಸನ್ನಿಧಿಯಲ್ಲಿ ಭೂದಾನ ಮಾಡಿದ್ದಾನೆ.[39] ಬೆಳಗಾವಿಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಈ ಮುನಿಗಳ ಪ್ರಸ್ತಾಪವಿದೆ.[40] ಪಾರ್ಶ್ವಪಂಡಿತ ಕವಿಯು ಪಾರ್ಶ್ವನಾಥ ಪುರಾಣದ ಪ್ರಾರಂಭದಲ್ಲಿ _

ಚಾರುಚರಿತ್ರಕೈರವವಿಕಾಸಿವಿಲಿರ್ಮಳಕೀರ್ತಿಚಂದ್ರಿಕಾ |
ಶ್ರೀರುಚಿಸತ್ಪಥೋಚಿತಕಳಾವಿಳಸಚ್ಛುಭವಚಂದ್ರದೇವ ||

ಎಂದು ಸಚ್ಚಾರಿತ್ರವೆಂಬ ನೈದಿಲೆಯನ್ನು ಅರಳಿಸುವ, ನಿರ್ಮಲವಾದ ಕೀರ್ತಿಯೆಂಬ ಬೆಳಂದಿಗಳಂತಿರುವ, ಉಚಿತವಾದ ಸನ್ಮಾರ್ಗವೆಂಬ ಪ್ರತಿಭೆಯುಳ್ಳ ಶುಭಚಂದ್ರ ಭಟ್ಟಾರಕರು ಮೇಲ್ಮೆಯನ್ನು ಬೆಳಗುವ ಶರತ್ಕಾಲದ ಚಂದ್ರನಂತಿದ್ದರೆಂದು ವರ್ಣಿಸಿದ್ದಾನೆ.[41]

**೨.೩.೧೯. ಅಜಿತಸೇನ ಮುನಿ**

ಯಾದವಾಡದ ಕ್ರಿ. ಶ. ಸುಮಾರು ೧೩ನೆಯ ಶತಮಾನದ ಶಾಸನದಲ್ಲಿ ಉಲ್ಲೀಖಿತ ಈ ಮುನಿಗಳು ಶ್ರಾವಕರಿಂದ ಸ್ಥಳೀಯ ಪಾರ್ಶ್ವನಾಥ ತೀರ್ಥಂಕರನ ಶಿಲ್ಪಕ್ಕೆ ಒಂದು ಮಾನ ತೂಕದ ಹಿತ್ತಾಳೆಯ ಚೌಕಟ್ಟನ್ನು ಮಾಡಿಸಿ ಕೊಟ್ಟಿದ್ದಾರೆ.[42]

**೨.೪. ಸಾಮಾಜಿಕ ವ್ಯವಸ್ಥೆ**

ಒಂದು ಪ್ರದೇಶದ ಸಾಮಾಜಿಕ ವ್ಯವಸ್ಥೆಯು ಅದರ ಸಾಂಸ್ಕೃತಿಕ ಸಂಪತ್ತಿನ ಆಳ-ಎತ್ತರಗಳನ್ನು, ವಿಸ್ತಾರ-ವ್ಯಾಪ್ತಿಯನ್ನು, ಪ್ರೌಢಿಮೆ-ಪ್ರಬುದ್ಧತೆಯನ್ನು ಅವಲಂಬಿಸಿರುತ್ತದೆ. ಗೋಕಾಕ ತಾಲೂಕಿನ ಜೈನ ಶಾಸನಗಳೂ ಈ ಪ್ರದೇಶದ ಸಾಮಾಜಿಕ ವ್ಯವಸ್ಥೆಯ ಕೆಲವು ಮುಖಗಳನ್ನು ಪರಿಚಯಿಸುತ್ತವೆ. ಅವು ಈ ಕೆಳಗಿನಂತಿವೆ.

**೨.೪.೧. ಚಾತುರ್ವರ್ಣಗಳು**

ಪ್ರಾಚೀನ ಕಾಲದಲ್ಲಿ ವ್ಯಕ್ತಿಗಳನ್ನು ಅವರು ಕೈಗೊಳ್ಳುವ ಉದ್ಯೋಗಗಳು ಮತ್ತು ವೃತ್ತಿಗಳ ಹಿನ್ನೆಲೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳಲ್ಲಿ ವಿಂಗಡಿಸಲಾಗಿತ್ತು. ಕಾಲಕ್ರಮೇಣ ಬೇರೆ ಬೇರೆ ವರ್ಣದವರು ಬೇರೆ ಬೇರೆಯವರ ವೃತ್ತಿಗಳನ್ನವಲಂಬಿಸಿದರು. ಹೀಗಾಗಿ ಬೇರೆ ಬೇರೆ ಜಾತಿಗಳು ಅಸ್ತಿತ್ವಕ್ಕೆ ಬಂದವು.[43] ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದ ಶಾಪಾಶಯದ ಭಾಗದಲ್ಲಿ 'ಈ ದಾನವನ್ನು ಅಪಹರಿಸಿದವರು ಮತ್ತು ದಾನಿಯನ್ನು ಅವಮಾನಿಸಿದವರು ಬ್ರಾಹ್ಮಣರನ್ನು ಕೊಂದ ಪಾಪಕ್ಕೆ ಗುರಿಯಾಗುತ್ತಾರೆ' ಎಂಬಿತ್ಯಾದಿ ವಿವರಗಳಿವೆ.[44] ಇದರಿಂದ ಅಂದಿನ ಸಮಾಜದಲ್ಲಿ ಬ್ರಾಹ್ಮಣರಿಗೆ ಗೌರವಯುತವಾದ ಸ್ಥಾನವಿತ್ತೆಂದು ಮನದಟ್ಟಾಗುತ್ತದೆ. ಈ ತಾಲೂಕಿನ ಜೈನ ಶಾಸನಗಳಲ್ಲಿ ಕ್ಷತ್ರಿಯ, ವೈಶ್ಯ ಮತ್ತು ಶೂದ್ರರ ಕುರಿತು ಉಲ್ಲೇಖಗಳಿಲ್ಲ. ಆದರೂ ಆಳರಸಾದಿ ಆಡಳಿತ ವರ್ಗವನ್ನು ಕ್ಷತ್ರಿಯರೆಂದೂ, ವ್ಯಾಪಾರ ವಾಣಿಜ್ಯದಲ್ಲಿ ನಿರತರಾಗಿದ್ದ ವರ್ತಕರು ಮತ್ತು ವ್ಯವಸಾಯ, ಪಶುಪಾಲನೆಯಲ್ಲಿ ತೊಡಗಿದ್ದ ವರ್ಗವನ್ನು ವೈಶ್ಯರೆಂದೂ ಹಾಗೂ ಸೈನ್ಯ ಪಡೆಗಳಲ್ಲಿ, ದೇವಾಲಯಗಳ ನಿರ್ಮಾಣ, ಶಿಲ್ಪಗಳು ಮತ್ತು ಶಾಸನಗಳ ಕಂಡರಣೆ, ಒಕ್ಕಲುತನ ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿದ್ದ ವರ್ಗವನ್ನು ಶೂದ್ರರೆಂದೂ ಪರಿಗಣಿಸಬಹುದು.

**೨.೪.೨. ಮಹಿಳೆಯರು**

ಭಾರತೀಯ ಸಂಸ್ಕೃತಿಯುದ್ದಕ್ಕೂ ಮಹಿಳೆಯರನ್ನು ಗೌರವಿಸುತ್ತ ಬಂದಿರುವುದು ಸಮಕಾಲೀನ ಸಾಹಿತ್ಯಿಕ ಮತ್ತು ಶಾಸನಾದಿ ಪುರಾತತ್ವ ಕುರುಹುಗಳು ದೃಢಪಡಿಸುತ್ತವೆ. ಮಹಿಳೆಯರಲ್ಲಿ ಕೆಲವರು ಸ್ಥಾನಬಲದಿಂದ ಪ್ರಾಮುಖ್ಯತೆ ಪಡೆದರೇ, ಇನ್ನೂ ಕೆಲವರು ಸ್ವ-ಕಾರ್ಯಬಲದಿಂದ ಪ್ರಾಮುಖ್ಯತೆ ಪಡೆದಿದ್ದಾರೆ. ಕನ್ನಡ ನಾಡಿನ ಸಂದರ್ಭದಲ್ಲಿ ಕೆಲವು ಮಹಿಳೆಯರು ರಾಜಕೀಯ, ಆಡಳಿತ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಶೇಷವಾಗಿ ಸಾಧನೆಗೈದಿದ್ದಾರೆ.[45] ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಕನಕಿ ಗಾವುಂಡಿಯ ಉಲ್ಲೇಖವಿದೆ.[46] ಕಲ್ಲೊಳ್ಳಿಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಸವದತ್ತಿ ರಟ್ಟ ಮನೆತನದ ಅರಸರ

ರಾಣಿಯರಾದ ಲಕ್ಷ್ಮೀದೇವಿ, ಪದ್ಮಲದೇವಿ, ಚಂದ್ರಿಕಾದೇವಿ, ಏಚಲಾದೇವಿ, ಹೊಲ್ಲಾದೇವಿ, ಚಂದಲದೇವಿ, ಮೈಳಲದೇವಿಯರ ಪ್ರಸ್ತಾಪಗಳಿವೆ.[47] ಇವರೆಲ್ಲರೂ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ಕೈಗೊಂಡು ಅಜರಾಮರರಾಗಿದ್ದಾರೆ.

**೨.೪.೩. ಶಿಕ್ಷಣ**

ಪ್ರಾಚೀನ ಮತ್ತು ಮಧ್ಯಯುಗೀನ ಕಾಲಾವಧಿಗಳಲ್ಲಿ ಶಿಕ್ಷಣ ವ್ಯವಸ್ಥೆ ಬಹುಪಾಲು ಧರ್ಮದ ತಳಹದಿಯ ಮೇಲೆ ರೂಪುಗೊಂಡಿತ್ತು. ಅಂದು ಶಿಕ್ಷಣವೆನ್ನುವುದು ಆತ್ಮಜ್ಞಾನವನ್ನು ಪಡೆಯುವ ಒಂದು ಮಾರ್ಗವಾಗಿತ್ತು. ವೈದಿಕ ಯುಗದಿಂದಲೂ ಸಮಕಾಲೀನ ಪ್ರತಿಯೊಂದು ಧರ್ಮೀಯರು ಶಿಕ್ಷಣಕ್ಕೆ ಪ್ರೋತ್ಸಾಹ ಕೊಡುವುದರೊಂದಿಗೆ ಹಲವೆಡೆಗಳಲ್ಲಿ ಶಿಕ್ಷಣ ಕೇಂದ್ರಗಳನ್ನು ಪ್ರಾರಂಭಿಸಿದ್ದಾರೆ. ಕನ್ನಡ ನಾಡಿನ ಸಂದರ್ಭದಲ್ಲಿ ಕ್ರಿಸ್ತಶಕಾರಂಭದಿಂದಲೂ ಜೈನ ಶಿಕ್ಷಣ ಕೇಂದ್ರಗಳು ಕಾರ್ಯನಿರ್ವಹಿಸುತ್ತ ಬಂದಿವೆ. ಅವುಗಳ ನಿರ್ವಹಣೆಯಲ್ಲಿ ಮುನಿಗಳು ಮತ್ತು ಭಟ್ಟಾರಕರ ಪಾತ್ರ ಪ್ರಮುಖವಾಗಿತ್ತು. ಕೆಲವು ಬಸದಿಗಳು ಶಿಕ್ಷಣ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಅದೇ ರೀತಿ ಅಗ್ರಹಾರಗಳು, ಮಠಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳೂ ಶಿಕ್ಷಣ ಕೇಂದ್ರಗಳಾಗಿದ್ದವು.[48]

ಗೋಕಾಕ ತಾಲೂಕಿನ ಜೈನ ಶಾಸನಗಳಲ್ಲಿ ಅಗ್ರಹಾರಗಳು, ಮಠಗಳು, ಬ್ರಹ್ಮಪುರಿಗಳು, ಘಟಿಕಾಸ್ಥಾನಗಳ ಪ್ರಸ್ತಾಪಗಳಿಲ್ಲ. ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನವು ರಾಷ್ಟ್ರಕೂಟ ಮನೆತನದ ದೇಜ್ಜಮಹಾರಾಜನ ಪುತ್ರ ಇಂದ್ರನಂದಾದಿ ರಾಜನು ತನ್ನ ಹಾಗೂ ತನ್ನ ಪೂರ್ವಜರ ಪುಣ್ಯಗೋಸ್ಕರ ವಿವಿಧ ಕಾರ್ಯಗಳಿಗೆ ಭೂದಾನವನ್ನು ಮಾಡುತ್ತಿದ್ದ ಸಂದರ್ಭದಲ್ಲಿ ಶಿಕ್ಷಕರಿಗೂ ದಾನ ಮಾಡಿರುವುದನ್ನು ನಿರೂಪಿಸಿದೆ.[49] ಹೀಗಾಗಿ ಅಂದು ಗೋಕಾಕವು ಜೈನ ಶಿಕ್ಷಣ ಕೇಂದ್ರವಾಗಿತ್ತೆಂದು ಮನದಟ್ಟಾಗುತ್ತದೆ. ಕನ್ನಡ ನಾಡಿನಲ್ಲಿ ಬಹುತೇಕ ತ್ರಿಕೂಟಾಚಲ ದೇವಾಲಯಗಳು ಮತ್ತು ಬಸದಿಗಳು ಶಿಕ್ಷಣ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಅವುಗಳಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳನ್ನು 'ವಿದ್ಯಾರ್ಥಿ ತಪೋಧನರು' ಮತ್ತು 'ವಿದ್ಯಾರ್ಥಿ ಮಾಣಿಯರು' ಎಂಬೆರಡು ಬಗೆಯಲ್ಲಿ ಗುರುತಿಸಲಾಗುತ್ತಿತ್ತು. ವಿದ್ಯಾರ್ಥಿ ತಪೋಧನರನ್ನು 'ನೈಷ್ಠಿಕ ತಪೋಧನ' ಮತ್ತು 'ನೈಷ್ಠಿಕ ಬ್ರಹ್ಮಚಾರಿ'ಗಳೆಂದು ಕರೆಯುತ್ತಿದ್ದರು. ಅವರು ದೇವಾಲಯುಗಳ ಆಚಾರ್ಯ ಪರಂಪರೆಗೆ ಸಂಬಂಧಿಸಿದ್ದವರಾಗಿದ್ದಾರೆ. ಆಜೀವಪರ್ಯಂತ ಬ್ರಹ್ಮಚಾರಿಗಳಾಗಿದ್ದುಕೊಂಡು ತಮ್ಮ ಅಧ್ಯಯನದ ತರುವಾಯ ಬೇರೆ ಬೇರೆ ಮಠಗಳಲ್ಲಿ ಸ್ಥಾನಪತಿಗಳಾಗಿ ಕಾರ್ಯನಿರ್ವಹಿಸಿರುವರು. ವಿದ್ಯಾರ್ಥಿ ಮಾಣಿಯರು ತಮ್ಮ ಅಧ್ಯಯನದ ತರುವಾಯ ಗೃಹಸ್ಥರಾಗುತ್ತಿದ್ದರು.[50] ಈ ಹಿನ್ನೆಲೆಯಲ್ಲಿ ಕಲ್ಲೊಳ್ಳಿಯ ತ್ರಿಕೂಟ ಶಾಂತಿನಾಥ ಬಸದಿಯು ಶಿಕ್ಷಣ ಕೇಂದ್ರವಾಗಿತ್ತೆಂಬುದು ಸ್ಪಷ್ಟವಾಗುತ್ತದೆ.

**೨.೫. ಆರ್ಥಿಕ ವ್ಯವಸ್ಥೆ**

ಒಂದು ಪ್ರದೇಶದ ಆರ್ಥಿಕ ವ್ಯವಸ್ಥೆ ಸ್ಥಳೀಯ ಪ್ರಾಕೃತಿಕ ಸಂಪತ್ತು, ಮೂಲಭೂತ ಸೌಕರ್ಯಗಳು ಮತ್ತು ಜನರ ದುಡಿಮೆಯನ್ನು ಅವಲಂಬಿಸಿರುತ್ತದೆ. ಈ ವ್ಯವಸ್ಥೆಗನುಗುಣವಾಗಿ ಆ ಪ್ರದೇಶದ ಜನರ ಜೀವನ ವಿಧಾನ ನಿರ್ಧರಿತವಾಗಿರುತ್ತದೆ. ಈ ನಿಟ್ಟಿನಲ್ಲಿ ಗೋಕಾಕ ತಾಲೂಕಿನ ಜೈನ ಶಾಸನಗಳ ಹಿನ್ನೆಲೆಯಲ್ಲಿ ಸ್ಥಳೀಯ ಆರ್ಥಿಕ ವ್ಯವಸ್ಥೆಯನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**೨.೫.೧. ಭೂಮಿ**

ಅಂದಿನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಭೂಮಿ ಪ್ರಮುಖ ಸ್ಥಾನ ಪಡೆದಿತ್ತು. ಈ ತಾಲೂಕಿನ ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ, ಕೊಣ್ಣೂರದ ಕ್ರಿ. ಶ. ೧೦೮೭ರ, ಕಲ್ಹೊಳೆಯ ಕ್ರಿ. ಶ. ೧೨೦೪ರ ಜೈನ ಶಾಸನಗಳು ಭೂದಾನಕ್ಕೆ ಸಂಬಂಧಿಸಿವೆ.[51] ದಾನವಾಗಿ ಕೊಡುವ ವಸ್ತುಗಳಲ್ಲಿ ಭೂಮಿ ಬಹು ಶ್ರೇಷ್ಠವಾದ ವಸ್ತುವಾಗಿತ್ತು. ಅಲ್ಲದೇ ಅಂದು ವ್ಯವಸಾಯವೇ ಜೀವನೋಪಾಯದ ಪ್ರಮುಖ ಉದ್ಯೋಗವಾಗಿತ್ತು. ಈ ತಾಲೂಕಿನಲ್ಲಿ ಒಣ ಬೇಸಾಯ ಭೂಮಿ ಮತ್ತು ನೀರಾವರಿ ಬೇಸಾಯ ಭೂಮಿಗಳೆರಡೂ ಕಂಡುಬರುತ್ತವೆ. ಇವುಗಳನ್ನು ನೀರಿನ ಆಸರೆ ಮತ್ತು ಬೆಳೆಯುವ ಬೆಳೆಗಳನ್ನು ಆಶ್ರಯಿಸಿ ಕ್ರಮವಾಗಿ ದೇವಮಾತೃಕ ಮತ್ತು ನದೀಮಾತೃಕ ಎಂದು ಕರೆಯಲಾಗುತ್ತಿತ್ತು. ಇವುಗಳನ್ನೇ ಸಮಕಾಲೀನ ಶಾಸನಗಳು ಕ್ರಮವಾಗಿ ಬೆದ್ದಲು ಮತ್ತು ಗದ್ದೆ ಎಂದು ಕರೆದಿವೆ.[52]

**೨.೫.೨. ನೀರಾವರಿ**

ಪ್ರಾಚೀನ ಕಾಲದಲ್ಲಿ ನೀರಾವರಿ ವ್ಯವಸ್ಥೆ ಮುಖ್ಯವಾಗಿ ಹಳ್ಳ, ನದಿ, ಬಾವಿ, ಕೆರೆಗಳನ್ನು ಅವಲಂಬಿಸಿತ್ತು. ಆಳರಸಾದಿಗಳು ಕರೆ, ಬಾವಿ, ಕಾಲುವೆಗಳನ್ನು ಕಟ್ಟಿಸುವುದು ತಮಗೆ ಶ್ರೇಯಸ್ಕರವೆಂದು ಭಾವಿಸಿದ್ದರು. ಭೂಮಿಗಳಿಗೆ ಹಳ್ಳ, ಬಾವಿ, ಕೆರೆಗಳಿಂದ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು. ಗೋಕಾಕ ತಾಲೂಕಿನ ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನದಲ್ಲಿ ಮುಂಜಾ ಜಲಮಾರ್ಗ, ಪುಷ್ಕರಣಿ, ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ನವಿಲಹಳ್ಳ, ಬಿಳಿಯ ಬಾವಿಯ ಉಲ್ಲೇಖಗಳಿವೆ.[53] ಅಲ್ಲದೇ ಈ ತಾಲೂಕಿನಲ್ಲಿ ಘಟಪ್ರಭಾ ನದಿ ಮತ್ತು ಕೆಲವು ಪ್ರಮುಖ ಹಳ್ಳಗಳು ಹರಿದಿವೆ. ಹೀಗಾಗಿ ಈ ತಾಲೂಕಿನಲ್ಲಿ ಯಾವಾಗಲೂ ನೀರಿನ ವ್ಯವಸ್ಥೆ ಅನುಕೂಲಕರವಾಗಿತ್ತು.

**೨.೫.೩. ಬೆಳೆಗಳು**

ಭೂಮಿಯಲ್ಲಿ ನೀರು ನಿಲ್ಲುವಂತೆ ಕಟ್ಟೆಯನ್ನು ಕಟ್ಟಿ, ಅದನ್ನು ಗದ್ದೆಯನ್ನಾಗಿ ಪರಿವರ್ತಿಸಿ ಅದರಲ್ಲಿ ಭತ್ತ ಮತ್ತು ಕಬ್ಬುಗಳನ್ನು ಬೆಳೆಯಲಾಗುತ್ತಿತ್ತು. ಈ ತಾಲೂಕಿನಲ್ಲಿ ನದಿ, ಹಳ್ಳ, ಕೆರೆ ಮತ್ತು ಬಾವಿಗಳಿಂದ ನೀರಾವರಿ ವ್ಯವಸ್ಥೆಯನ್ನು ಪಡೆದಿದ್ದ ತೋಟಗಳಲ್ಲಿ ಮುಖ್ಯವಾಗಿ ತೆಂಗು, ವೀಳೆಯದೆಲೆ, ಅಡಕೆ, ಬಾಳೆ, ಮಾವು, ಹಲಸು, ಹುಣಸೆ, ಈಳೆ, ನಿಂಬೆ, ಮೊದಲಾದ ಹಣ್ಣು, ಹೂವು ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಕೊಣ್ಣೂರದ ಕ್ರಿ. ಶ. ೧೦೮೭ರ ಮತ್ತು ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನಗಳಲ್ಲಿ ಎಳೆಬಳ್ಳಿ, ಅಡಕೆ ಇತ್ಯಾದಿ ತೋಟಗಳ ಉಲ್ಲೇಖಗಳಿವೆ.[54] ಬಸದಿಗಳ ಪರಿಸರದಲ್ಲಿ ಅವುಗಳಿಗೆ ಮೀಸಲಾದ ಹೂದೋಟಗಳಿರುತ್ತಿದ್ದವು. ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಹೂದೋಟದ ಪ್ರಸ್ತಾಪವಿದೆ.[55] ಒಣ ಬೇಸಾಯ ಭೂಮಿಗಳಲ್ಲಿ ಸಾಮಾನ್ಯವಾಗಿ ಜೋಳ, ದ್ವಿದಳ ಧಾನ್ಯ, ಹತ್ತಿ, ಹರಳು, ಸಾಸುವೆ, ಕೊತ್ತುಂಬರಿ, ಸಜ್ಜೆ, ಗೋಧಿ ಮೊದಲಾದ ಬೆಳೆಗಳನ್ನು ಬೆಳೆಯಲಾಗುತ್ತಿತ್ತು.

**೨.೫.೪. ಪಶುಪಾಲನೆ**

ವ್ಯವಸಾಯ, ಸಾರಿಗೆ, ಹೈನುಗಾರಿಕೆ ಮೊದಲಾದ ಚಟುವಟಿಕೆಗಳಿಗಾಗಿ ವಿವಿಧ ಪ್ರಾಣಿಗಳನ್ನು ಸಾಕಲಾಗುತ್ತಿತ್ತು. ಅವುಗಳಲ್ಲಿ ಗೋವು ವಿಶೇಷ ಸಂಪತ್ತು ಎಂದು ಪರಿಗಣಿತವಾಗಿತ್ತು. ಅಲ್ಲದೇ ಕ್ರಿ. ಶ. ಸುಮಾರು

೧೧ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೂ ಗೋವುಗಳು ಆರ್ಥಿಕ ದೃಷ್ಟಿಯಿಂದ ಪ್ರಧಾನವಾಗಿದ್ದವು. ಸಾರಿಗೆ ವ್ಯವಸ್ಥೆಯಲ್ಲಿ ಎತ್ತುಗಳ ಪಾತ್ರ ಪ್ರಮುಖವಾಗಿತ್ತು. ಎಣ್ಣೆಗಾಣಗಳಿಗೂ ಎತ್ತುಗಳನ್ನು ಹೂಡಲಾಗುತ್ತಿತ್ತು. ಗೋಕಾಕ ತಾಲೂಕಿನಲ್ಲಿ ಸಾರಿಗೆ, ದಾನ, ವ್ಯವಸಾಯ ಮೊದಲಾದ ಕ್ಷೇತ್ರಗಳಲ್ಲಿ ಎತ್ತು, ಕತ್ತೆ, ಕೋಣಗಳನ್ನು ಬಳಸುತ್ತಿದ್ದ ವಿಚಾರ ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಿಂದ ಸ್ಪಷ್ಟವಾಗುತ್ತದೆ.[56]

**೨.೫.೫. ಎಣ್ಣೆ ಉತ್ಪಾದನಾ ಕೈಗಾರಿಕೆಗಳು**

ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಪ್ರಮುಖ ಕೈಗಾರಿಕೆಗಳಲ್ಲಿ ದಿನನಿತ್ಯದ ಬದುಕಿಗೆ ಅಗತ್ಯವಾದ ಗಾಣದೆಣ್ಣೆಯ ಉತ್ಪಾದನೆಯೂ ಒಂದು. ಬಹುಪಾಲು ಎಣ್ಣೆಯನ್ನು ಆಹಾರ ಪದಾರ್ಥಗಳಲ್ಲಿ ಮತ್ತು ಬಸದಿಗಳಲ್ಲಿ ನಂದಾದೀಪಕ್ಕೆ ಉಪಯೋಗಿಸಲಾಗುತ್ತಿತ್ತು. ಎಣ್ಣೆ ತೆಗೆಯುವ ವೃತ್ತಿಯವರನ್ನು ತೈಲಿಗರು, ಗಾಣಿಗರು ಎಂದು ಕರೆಯುತ್ತಿದ್ದರು. ಗೋಕಾಕ ತಾಲೂಕಿನ ಕೊಣ್ಣೂರದ ಕ್ರಿ. ಶ. ೧೦೮೭ರ ಮತ್ತು ಕಲ್ಹೊಳೆಯ ಕ್ರಿ. ಶ. ೧೨೦೪ರ ಜೈನ ಶಾಸನಗಳಲ್ಲಿ ಎಣ್ಣೆಗಾಣಗಳು ಮತ್ತು ಎಣ್ಣೆ ದಾನದ ಉಲ್ಲೇಖಗಳಿವೆ.[57]

**೨.೫.೬. ಅಳತೆ ಮತ್ತು ತೂಕುಗಳು**

ಹೊಲದ ವಿಸ್ತೀರ್ಣವನ್ನು ಅದರಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಆಧಾರದಿಂದ ಮತ್ತು ಅಳತೆಗೋಲುಗಳ ಸಹಾಯದಿಂದ ಅಳೆಯಲಾಗುತ್ತಿತ್ತು. ಆಯಾ ಪ್ರದೇಶದ ಅಳತೆಗೋಲುಗಳು ಅವುಗಳನ್ನಿಟ್ಟಿದ್ದ ಬಸದಿಗಳು, ಊರುಗಳು, ಅವುಗಳನ್ನು ಹೊರಡಿಸಿದ ವ್ಯಕ್ತಿಯ ಹೆಸರು ಇಲ್ಲವೇ ಬಿರುದು ಮೊದಲಾದ ಹೆಸರುಗಳಿಂದ ಕರೆಯಲ್ಪಡುತ್ತಿದ್ದವು. ಗೋಕಾಕ ತಾಲೂಕಿನ ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಕೊಂಡಿಯ ಕೋಲು, ಕಮ್ಮ, ಕೆಯ್ಯ, ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಕಂಬ, ಕೆಯ್ಯ, ಕುಬುಂಬೆಟ್ಟ ಕೋಲು, ಗೇಣು, ಮೊಳ, ರಾಜಹಸ್ತ, ಹಸ್ತ, ಬಳ್ಳ, ಹೇಱು, ಹೊಱೆ, ಸೊಲ್ಲು ಅಳತೆ, ತೂಕು ಮತ್ತು ಮಾಪನಗಳ ಉಲ್ಲೇಖಗಳಿವೆ.[58] ಕೊಂಡಿಯ ಕೋಲು ಮತ್ತು ಕುಬುಂಬೆಟ್ಟ ಕೋಲು ಗಮನಾರ್ಹವಾಗಿವೆ. ಈ ಅಳತೆ ಕೋಲುಗಳು ಸವದತ್ತಿ ರಟ್ಟ ಮನೆತನದ ಆಳ್ವಿಕೆಯ ಕೂಹೂಂಡಿ-೩೦೦೦ ಆಡಳಿತ ಪ್ರಾಂತದಲ್ಲಿ ಪ್ರಚಲಿತದಲ್ಲಿದ್ದವು.

**೨.೫.೭. ವ್ಯಾಪಾರ ಮತ್ತು ವಾಣಿಜ್ಯ**

ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನದಲ್ಲಿ ಮತ್ತರು, ಕೊಣ್ಣೂರದ ಕ್ರಿ. ಶ. ೧೦೩೨ರ ಶಾಸನದಲ್ಲಿ ಗದ್ಯಾಣ ಮತ್ತು ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಸಂತೆ, ಸೆಟ್ಟಿಯರು, ಅಂಗಡಿಗಳು, ಬಂಡಿಗಳು, ಮುಮ್ಮುರಿದಂಡ ವರ್ತಕರ ಪ್ರಸ್ತಾಪಗಳಿವೆ.[59] ಇವೆರಡೂ ಗ್ರಾಮಗಳು ಅಂದು ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ಇವುಗಳಲ್ಲಿ ಸಂತೆ ನಡೆಯುತ್ತಿತ್ತು. ವ್ಯಾಪಾರದಲ್ಲಿ ಸೆಟ್ಟಿಯರ ಪಾತ್ರ ಮುಖ್ಯವಾಗಿತ್ತು. ದೂರದ ಊರುಗಳಿಂದ ಸರಕುಗಳನ್ನು ಸಾಗಿಸಲು ಬಂಡಿಗಳನ್ನು ಉಪಯೋಗಿಸಲಾಗುತ್ತಿತ್ತು. ನಾಣ್ಯ ವ್ಯವಸ್ಥೆಯಲ್ಲಿ ಗದ್ಯಾಣ ಎಂಬುದು ಸಾಮಾನ್ಯವಾಗಿತ್ತು. ಕೇವಲ ವ್ಯಾಪಾರ ವೃತ್ತಿಯನ್ನು ಮಾಡುತಿದ್ದ ವಿನಿಮಯ ವರ್ತಕರಲ್ಲಿ ಪ್ರಮುಖರಾಗಿದ್ದ ಮುಮ್ಮುರಿದಂಡರು ಸರಕುಗಳನ್ನು (ಅಡಿಕೆ, ಅರಿಷಿಣ, ಮೆಣಸು ಇತ್ಯಾದಿ) ಹೇರಿಕೊಂಡು ಸಂತೆ-ಪೇಟೆಗಳಿಗೆ ಹೋಗಿ ಮಾರಾಟ ಮಾಡುತ್ತಿದ್ದರು. ಕೆಲವು ಸಲ ಅಲ್ಲಿಯೇ ಸರಕು ಖರೀದಿಸಿ ಬೇರೆ ಸ್ಥಳಗಳಲ್ಲಿ ಮಾರುತ್ತಿದ್ದರು.[60] ಇದರೊಂದಿಗೆ ಸಾಮಾಜಿಕ ಮತ್ತು ಧಾರ್ಮಿಕ ಚಟುವಟಿಕೆಗಳನ್ನೂ ಕೈಗೊಳ್ಳುತ್ತಿದ್ದರು. ಕಲ್ಹೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಉಲ್ಲೇಖಿತ ಮುಮ್ಮುರಿದಂಡರು ಮತ್ತು ನಾಡಪ್ರಭುಗಳು ಸ್ಥಳೀಯ ತ್ರಿಕೂಟ ಶಾಂತಿನಾಥ ಬಸದಿಗೆ ತಮ್ಮ ಆದಾಯದ ಕೆಲವು ಭಾಗವನ್ನು ದಾನ ಮಾಡಿದ್ದಾರೆ.[61] ಅವುಗಳ ವಿವರಗಳು ಈ ಕೆಳಗಿನಂತಿವೆ.

| | | |
|---|---|---|
| ಒಂದು ಹೆರಿಗೆ ಧಾನ್ಯಕ್ಕೆ | - | ಒಂದು ಮಾನ |
| ಒಂದು ಬಂಡಿಗೆ | - | ಎರಡು ಬಳ್ಳ |
| ಒಂದು ಅಡಕ್ಕೆ ಹಸರಕ್ಕೆ | - | ಐದು ಅಡಕೆ |
| ಒಂದು ಹೇರು ಎಲೆಗೆ | - | ನೂರು ಎಲೆ |
| ಒಂದು ಹಡಿಗೆ ಎಲೆಗೆ | - | ಐವತ್ತು ಎಲೆ |
| ಒಂದು ಗಾಣಕ್ಕೆ | - | ಸೊಲ್ಲಿಗೆ ಎಣ್ಣೆ |
| ಒಂದು ಕಂಪೆ ಮಡಕೆಗಳಿಗೆ | - | ಒಂದು ಮಡಕೆ |

### ೨.೬. ಶಾಸನ ಸಾಹಿತ್ಯ

ಗೋಕಾಕ ತಾಲೂಕಿನ ಜೈನ ಶಾಸನಗಳಲ್ಲಿ ಇವುಗಳನ್ನು ಬರೆದ ಕವಿಗಳ ಭಾಷಾ ಪ್ರಭುತ್ವ, ಛಂದಸ್ಸಿನ ನೈಪುಣ್ಯ, ಅಲಂಕಾರ ಶಾಸ್ತ್ರ ಪರಿಣತಿಯನ್ನು ಗಮನಿಸಬಹುದಾಗಿದೆ. ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿತವಾಗಿರುವ ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ, ಕೊಣ್ಣೂರದ ಕ್ರಿ. ಶ. ೧೦೮೭ರ, ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನಗಳಲ್ಲಿ ಈ ಪರಿಸರದ ನೈಸರ್ಗಿಕ ಸೌಂದರ್ಯದ ವರ್ಣನೆ ಮನಮೋಹಕವಾಗಿ ವರ್ಣಿಸಲ್ಪಟ್ಟಿದೆ.[62] ಈ ಶಾಸನಗಳಲ್ಲಿ ಅರಸರ ಮತ್ತು ರಾಣಿಯರ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳನ್ನು ಹಾಗೂ ಮುನಿಗಳ ತಪಸ್ಸು, ಧರ್ಮಪ್ರಸಾರ, ವ್ಯಕ್ತಿತ್ವ, ಅಧ್ಯಾತ್ಮಿಕ, ಸಾಹಿತ್ಯಿಕ ಹಿನ್ನೆಲೆ ಮೊದಲಾದ ವಿವರಗಳನ್ನು ವರ್ಣಿಸುವಲ್ಲಿ ಉಪಮೆಗಳ ಬಳಕೆ ಸೊಗಸಾಗಿದೆ.

### ೨.೭. ಕವಿಗಳು ಮತ್ತು ವಿದ್ವಾಂಸರು

ಜೈನ ಧರ್ಮದ ಮುನಿಗಳು ಮತ್ತು ಭಟ್ಟಾರಕರು ಮಹಾವಿದ್ವಾಂಸರಾಗಿದ್ದರು. ಅವರು ತಮ್ಮ ಅಧ್ಯಾತ್ಮಿಕ ಮತ್ತು ಸಾಹಿತ್ಯಿಕ ಸಾಧನೆಗಳೊಂದಿಗೆ ವಿದ್ಯಾ ಪ್ರಸಾರವನ್ನೂ ಕೈಗೊಳ್ಳುತ್ತಿದ್ದರು. ಗೋಕಾಕ ತಾಲೂಕಿನ ಪರಿಸರದಲ್ಲಿದ್ದ ಶ್ರೀಧರಾಚಾರ್ಯ, ಶ್ರೀಧರ ಮುನಿ, ಧರಸೇನ ಮುನಿ, ವಾಸುಪೂಜ್ಯ ಮುನಿ, ಶ್ರುತಕೀರ್ತಿ ಮುನಿ ಪದ್ಮಪ್ರಭ ಮುನಿ, ಮಲಧಾರಿ ಮುನಿ, ನೇಮಿಚಂದ್ರ ಮುನಿ, ಶುಭಚಂದ್ರ ಭಟ್ಟಾರಕ ಅಧ್ಯಾತ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಇಂತಹ ಕಾರ್ಯಗಳಲ್ಲಿ ತೊಡಗಿದ್ದರೆಂಬುದು ಇಲ್ಲಿಯ ಜೈನ ಶಾಸನಗಳಿಂದ ಮನದಟ್ಟಾಗುತ್ತದೆ. ಆದರೆ ಅವರು ರಚಿಸಿರಬಹುದಾದ ಗ್ರಂಥಗಳು ಈ ವರೆಗೆ ಬೆಳಕಿಗೆ ಬಂದಿಲ್ಲ.

ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನವನ್ನು ಜೈನ ಕವಿ ಪಾರ್ಶ್ವಪಂಡಿತನು ರಚಿಸಿದ್ದಾನೆ.[63] ಈತನು ಸವದತ್ತಿ ರಟ್ಟ ಮನೆತನದ ೪ನೆಯ ಕಾರ್ತವೀರ್ಯನ ಆಶ್ರಯದಲ್ಲಿದ್ದನು. ೨೩ನೆಯ ತೀರ್ಥಂಕರ ಪಾರ್ಶ್ವನಾಥನ ಕುರಿತು ಚಂಪೂ ಶೈಲಿಯಲ್ಲಿ 'ಪಾರ್ಶ್ವನಾಥ ಪುರಾಣ' ಎಂಬ ಧಾರ್ಮಿಕ ಕೃತಿಯನ್ನು ರಚಿಸಿದ್ದಾನೆ. ಇದರಲ್ಲಿ ಪಾರ್ಶ್ವನಾಥ ತೀರ್ಥಂಕರನ ಪೂರ್ವ ಭವಾವಳಿಗಳನ್ನು ಹದಿನಾರು ಆಶ್ವಾಸಗಳಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾನೆ. ಈ ಪುರಾಣದಲ್ಲಿ ತನ್ನ ತಂದೆ ಲೋಕಣನಾಯಕ, ತಾಯಿ ಕಾಮಿಯಕ್ಕ, ಗುರು ವಾಸುಪೂಜ್ಯಮುನಿ, ಹಿರಿಯ ಸಹೋದರ ನಾಗಣ್ಣ, ಆಶ್ರಯದಾತ ಸವದತ್ತಿ ರಟ್ಟ ಮನೆತನದ ೪ನೆಯ ಕಾರ್ತವೀರ್ಯ ಎಂದು ಹೇಳಿಕೊಂಡಿದ್ದಾನೆ. ಪುರಾಣದ ಪ್ರಾರಂಭದಲ್ಲಿ ತನ್ನ ಗುರು ಪರಂಪರೆಯನ್ನು ಕವಿ ಪರಮೇಷ್ಠಿಗಳಿಂದ ಆರಂಭಿಸಿ ಉಮಾಸ್ವಾತಿ ಮುನಿ, ಜಟಾಚಾರ್ಯ ಮುನಿ, ಕುಂದಕುಂದಾಚಾರ್ಯ, ಪೂಜ್ಯಪಾದ, ಅಕಳಂಕ, ಸಮಂತಭದ್ರ, ವೀರಾಚಾರ್ಯ, ವೀರಸೇನ, ಜಿನಸೇನ, ಗುಣಭದ್ರ, ಸೋಮದೇವ, ವಾದಿರಾಜ, ಮುನಿಚಂದ್ರ, ಶ್ರುತಕೀರ್ತಿ, ವಾಸುಪೂಜ್ಯ, ನೇಮಿಚಂದ್ರ, ಉದಯಚಂದ್ರ ಮುನಿ, ರಾಮಚಂದ್ರ ಮುನಿ, ಶ್ರೀನಂದಿ ಮುನಿ, ಶುಭಚಂದ್ರತ್ರೈವಿದ್ಯ ಮುನಿ ಮತ್ತು ವೀರನಂದಿ

ಮುನಿಗಳವರೆಗೆ ಉಲ್ಲೇಖಿಸಿದ್ದಾನೆ. ಜೊತೆಗೆ ಕೆಲವು ಪ್ರಾಚೀನ ಕವಿಗಳನ್ನೂ ಸ್ಮರಿಸಿದ್ದಾನೆ. ಅವರಲ್ಲಿ ಆಚಣ್ಣ, ೧ನೆಯ ಗುಣವರ್ಮ, ಪೊನ್ನ, ಪಂಪ, ರನ್ನ, ಅಗ್ಗಳ, ನಾಗಚಂದ್ರ, ಬೊಪ್ಪಣ್ಣ, ಕೇಶಿಯಣ್ಣ, ಕವಿಕಾಮ, ಬಾಳಚಂದ್ರಕವಿ, ವಾಸುದೇವ ಪ್ರಮುಖರಾಗಿದ್ದಾರೆ.[64]

## ೩.೮. ಶಾಸನೋಕ್ತ ಸ್ಥಳನಾಮಗಳು

ಮೂಲತಃ ಗ್ರಾಮಗಳು ನಿಸರ್ಗವಾಚಿ (ಗುಡ್ಡ, ಬೆಟ್ಟ, ಕೋಡ, ದಿನ್ನಿ, ಗುತ್ತಿ, ಮರಡಿ, ಕಣಿ, ಕಾಡು, ಕುಪ್ಪಿ, ಕೊಪ್ಪ, ಘಟ್ಟ, ಗಿರಿ, ಬಂಡೆ, ಬಯಲು, ಹೊಳೆ, ನೀರು, ಹಳ್ಳ ಇತ್ಯಾದಿ), ಜನಾಂಗವಾಚಿ, ವಸತಿವಾಚಿ (ಊರು, ಪಳ್ಳಿ, ಆಹಾರ, ಒಕ್ಕಲು, ಗ್ರಾಮ, ನಗರ, ಪಟ್ಟಣ, ಪಟ್ಟಿ, ಪುರ, ಹಾಳು, ಬೀಡು, ಮಂಗಲ, ಮನೆ, ಬಾಡ, ಹಿತ್ತಲು, ಪೊಳಲು, ದಡ್ಡಿ ಇತ್ಯಾದಿ), ವ್ಯಕ್ತಿವಾಚಿ, ಆದರ್ಶವಾಚಿ, ನಿರ್ಮಾಣವಾಚಿಗಳ (ಕೆರೆ, ಸಮುದ್ರ, ಏರಿ, ಕೊಳ, ಸಾಗರ, ಹೊಂಡ, ಕುಳಿ, ಬಾವಿ, ಕೋಡಿ, ಕೋಟೆ, ದುರ್ಗ, ಮಠ, ಗುಡಿ ಇತ್ಯಾದಿ) ಹಿನ್ನೆಲೆಯಲ್ಲಿ ರೂಪುಗೊಂಡಿರುತ್ತವೆ. ಆದರೆ ಗ್ರಾಮನಾಮದ ರಚನೆ ಸಾಮಾನ್ಯವಾಗಿ ಪಾಮರ ನಿಷ್ಪತ್ತಿ, ಪಂಡಿತ ನಿಷ್ಪತ್ತಿ ಮತ್ತು ನಿಜ ನಿಷ್ಪತ್ತಿ ಎಂಬ ಮೂರು ನಿಷ್ಪತ್ತಿಗಳ ಹಂತಗಳಲ್ಲಿ ನಡೆದಿರುತ್ತದೆ.[65] ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನದಲ್ಲಿ ಜಳಾರಗ್ರಾಮ, ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನದಲ್ಲಿ ಕೊಂಡನೂರ, ಕಲ್ಹೊಳೆಯ ಕ್ರಿ. ಶ. ೧೨೦೮ರ ಶಾಸನದಲ್ಲಿ ವೇಣುಗ್ರಾಮ, ಸಿಂದನ ಕಲ್ಹೊಳೆ, ಕುಱುಂಬೆಟ್ಟ, ಕಂಕಣನೂರ, ಗ್ರಾಮಗಳ ಪ್ರಸ್ತಾಪಗಳಿವೆ.[66] ಜಳಾರಗ್ರಾಮವು ಇಂದಿನ ಗೋಕಾಕ, ಕೊಂಡನೂರವು ಇಂದಿನ ಕೊಣ್ಣೂರ, ವೇಣುಗ್ರಾಮವು ಇಂದಿನ ಬೆಳಗಾವಿ, ಸಿಂದನ ಕಲ್ಹೊಳೆಯು ಇಂದಿನ ಕಲ್ಹೊಳೆ, ಕುಱುಂಬೆಟ್ಟವು ಇಂದಿನ ಶಿಂದಿಕುರುಬೆಟ್ಟ, ಕಂಕಣನೂರವು ಇಂದಿನ ರಾಯಬಾಗ ತಾಲ್ಲೂಕಿನ ಕಂಕಣವಾಡಿ ಗ್ರಾಮಗಳಾಗಿವೆ.

ಹೀಗೆ ಗೋಕಾಕ ತಾಲ್ಲೂಕಿನ ಜೈನ ಶಾಸನಗಳು ಸಮಕಾಲೀನ ರಾಜಕೀಯ, ಆಡಳಿತ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳ ವಿವಿಧ ಮುಖಗಳ ಪುನರಾವಲೋಕನಕ್ಕೆ ಬಹು ಮಹತ್ವವಾದ ವಿವರಗಳನ್ನು ಕಥಿಸುತ್ತವೆ. ಇವುಗಳಿಂದ ಈ ತಾಲ್ಲೂಕಿನ ಜನರು ನಡೆದಿರುವ ಮಾರ್ಗವನ್ನು ಪಡೆದಿರುವ ಸಿದ್ಧಿಯನ್ನು ಗುರುತಿಸಲು ಸಾಧ್ಯವಾಗಿದೆ. ಹೀಗಾಗಿ ಇವು ಈ ತಾಲ್ಲೂಕಿನ ಚೇತನೆಯ ಚಿಹ್ನೆಗಳಂತೆ ತೋರುತ್ತವೆ.

### ಅಡಿಟಿಪ್ಪಣಿಗಳು

1. ಶಾಸನಗಳ ಕುರಿತಾಗಿ ವಿವರಣೆಗಳಿಗೆ ಡಾ. ಎಂ. ಚಿದಾನಂದಮೂರ್ತಿ ಅವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (೧೯೬೬) ಕೃತಿಯಿಂದ ಉಪಕೃತನಾಗಿದ್ದೇನೆ.
2. ಇದಕ್ಕೆ ಅಪವಾದವೆಂಬಂತೆ ಅಲಹಾಬಾದ್ ಜಿಲ್ಲೆಯ ಗಿಂಜಿ ಬೆಟ್ಟದ ಬಂಡೆಯೊಂದರ ಮೇಲೆ ಭೀಮಸೇನ ಅರಸನನ್ನು ವರ್ಣಿಸುವ ಶಾಸನವನ್ನು ಬಣ್ಣದಲ್ಲಿ ಬರೆಯಲಾಗಿದೆ. ಅಜಂತಾದ ಬೌದ್ಧ ಗುಹಾಲಯದಲ್ಲಿರುವ ಭಿತ್ತಿ ಚಿತ್ರಗಳಿಗೆ ಸಂಬಂಧಿಸಿದಂತೆ ಅನೇಕ ವರ್ಣಿತ ಶಾಸನಗಳಿವೆ. ರಾಂಚಿ, ಭೋಜ್‌ಪುರ ಮತ್ತು ಅಂಧೇರ್‌ದಲ್ಲಿ ದೊರೆತ ಕೆಲವು ಮಣ್ಣಿನ ಅವಶೇಷಗಳ ಮೇಲೆ ಮಸಿಯಲ್ಲಿ ಬರೆಯಲಾಗಿದೆ. ಗೋರಖ್‌ಪುರ ಜಿಲ್ಲೆಯ ಕಾಸಿಯಾದಲ್ಲಿ ದೊರೆತ ತಾಮ್ರಪಟದಲ್ಲಿರುವ ೧೫ ಸಾಲುಗಳಲ್ಲಿ ಮೊದಲನೆಯ ಸಾಲನ್ನು ಮಸಿಯಲ್ಲಿ ಬರೆಯಲಾಗಿದೆ. (ಕೃಷ್ಣಕುಮಾರ ಸಿ. ಪಿ., ಶಾಸನಶಾಸ್ತ್ರ (೧೯೯೩), ಪು. ೩೮-೩೯).

3. ಜೆ. ಬಿ. ಬಿ. ಆರ್. ಎ. ಎಸ್. ಸಂ. X, ಪು. ೨೨೦-೨೩೯.

4. ಗುರವ ಆರ್. ಎನ್., "ಪಾರ್ಶ್ವಪಂಡಿತನ ಕಲ್ಹೊಳೆಯ ಶಾಸನ", ಕರ್ನಾಟಕ ಭಾರತಿ ಸಂ. ೬/೩ (ಜನೇವರಿ-೧೯೭೪), ಪು. ೪೩-೫೪.

5. ಕಲಬುರ್ಗಿ ಎಂ. ಎಂ. (ಸಂ.), ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು ಭಾಗ-೧ (೧೯೯೯), ಪು. ೮.

6. ಗುರವ ಆರ್. ಎನ್., ಪೂರ್ವೋಕ್ತ.

7. ಪಾಟೀಲ ಶಿ. ಬಾ., ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ (೧೯೯೫), ಪು. ೩೩.

8. ಗೋಗಿ ಹನುಮಾಕ್ಷಿ, ಅನುಶಾಸನ (೨೦೦೨), ಪು. ೩೩-೩೮.

9. ಗುರವ ಆರ್. ಎನ್., ಪೂರ್ವೋಕ್ತ.

10. ಗೋಗಿ ಹನುಮಾಕ್ಷಿ, ಪೂರ್ವೋಕ್ತ, ಪು. ೫೦-೭೪.

11. ಗುರವ ಆರ್. ಎನ್., ಪೂರ್ವೋಕ್ತ.

12. ನಾವಲಗಿ ಸಿ. ಕೆ., "ಕೊಣ್ಣೂರು-ಒಂದು ಜೈನ ಐತಿಹ್ಯ", ಜೈನ ಕ್ಷೇತ್ರಗಳ ಐತಿಹ್ಯ (೧೯೯೦), ಪು. ೮೬-೮೭.

13. ಎ. ಆಯ್. ಸಂ. XXI, ಶಾ. ಸಂ. ೪೩, ಪು. ೨೮೯-೨೯೨.

14. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.

15. ಅದೇ.

16. ಅದೇ.

17. ಅದೇ.

18. ಕೆ. ಆಯ್. ಸಂ. V, ಶಾ. ಸಂ. ೩೩.

19. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.

20. ಅದೇ.

21. ನೇಗಿನಹಾಳ ಎಂ. ಬಿ., "ಉಳ್ಳಾಗಡ್ಡಿ ಖಾನಾಪುರ ಶಾಸನಗಳು" ಕನ್ನಡ ಅಧ್ಯಯನ (ಚಳಿ ಸಂಚಿಕೆ-೨೦೦೨), ಪು. ೫೪, ಕನ್ನಡ ವಿಶ್ವವಿದ್ಯಾಲಯ ಹಂಪಿ. ಕೆ. ಆಯ್. ಸಂ. V, ಶಾ. ಸಂ. ೩೩. ಎ. ಆಯ್. ಸಂ. XXXII, ಪು. ೨೧೭. ಕೆ. ಆಯ್. ಸಂ. I, ಶಾ. ಸಂ. ೩೨. ಎ. ಆರ್. ಎಸ್. ಆಯ್. ಇ. ೧೯೬೧-೬೨, ಶಾ. ಸಂ. ೬೧, ಪು. ೯೭.

22. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.

23. ಅದೇ.

24. ಕೆ. ಆಯ್. ಸಂ. V, ಶಾ. ಸಂ. ೩೩.

25. ಬೊಮ್ಮರಸ ಪಂಡಿತ ಎಸ್. (ಸಂ.), ಪಾರ್ಶ್ವಪಂಡಿತನ ಪಾರ್ಶ್ವನಾಥ ಪುರಾಣ (೧೯೫೭), ಪು. ೮.

26. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.

27. ಕೆ. ಆಯ್. ಸಂ. V, ಶಾ. ಸಂ. ೩೩.

28. ಬೊಮ್ಮರಸ ಪಂಡಿತ ಎಸ್. (ಸಂ.), ಪೂರ್ವೋಕ್ತ, ಪು. ೧೦.
29. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.
30. ಕೆ. ಆಯ್. ಸಂ. V, ಶಾ. ಸಂ. ೩೩.
31. ತಬೋಜಿ ಚಂದ್ರಶೇಖರ ಬಿ., "ಕೊಣ್ಣೂರಿನ ಜಿನಬಿಂಬ ಶಾಸನ", ಶಾಸನ ಅಧ್ಯಯನ ಸಂ. ೨ (೨೦೦೪), ಪು. ೨೦-೨೧, ಕನ್ನಡ ವಿಶ್ವವಿದ್ಯಾಲಯ ಹಂಪಿ.
32. ಅದೇ.
33. ತಬೋಜಿ ಚಂದ್ರಶೇಖರ ಬಿ., "ಗೋಕಾಕದ ಜಿನಬಿಂಬ ಶಾಸನ", ಸ್ಟಡೀಜ್ ಇನ್ ಕರ್ನಾಟಕ ಹಿಸ್ಟ್ರಿ ಆ್ಯಂಡ್ ಕಲ್ಚರ್ ಪ್ರೊಸಿಡಿಂಗ್ಸ್ ವೆಲ್ಯೂಮ್-VII (೨೦೦೬), ಪು. ೧೭೩.
34. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.
35. ಎ. ಆಯ್. ಸಂ. XIII, ಶಾ. ಸಂ. ೩/ಎ ಮತ್ತು ಬಿ.
36. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.
37. ಕೆ. ಆಯ್. ಸಂ. V, ಶಾ. ಸಂ. ೩೩. ಎ. ಆಯ್. ಸಂ. XIII, ಶಾ. ಸಂ. ೩/ಎ ಮತ್ತು ಬಿ.
38. ಬೊಮ್ಮರಸ ಪಂಡಿತ ಎಸ್. (ಸಂ.), ಪೂರ್ವೋಕ್ತ, ಪು. ೧೧.
39. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.
40. ಎ. ಆಯ್. ಸಂ. XIII, ಶಾ. ಸಂ. ೩/ಎ ಮತ್ತು ಬಿ.
41. ಬೊಮ್ಮರಸ ಪಂಡಿತ ಎಸ್. (ಸಂ.), ಪೂರ್ವೋಕ್ತ, ಪು. ೧೨.
42. ಅಪ್ರಕಟಿತ ಶಾಸನ.
43. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (೧೯೭೬), ಪು. ೪೩೦-೪೩೧.
44. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.
45. ಎಲಿಗಾರ ಚೆನ್ನಕ್ಕ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ (೧೯೯೦), ಪು. ೪.
46. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ.
47. ಗುರವ ಆರ್. ಎನ್., ಪೂರ್ವೋಕ್ತ.
48. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೨೧೭-೨೨೩.
49. ಎ. ಆಯ್. ಸಂ. XXI, ಶಾ. ಸಂ. ೪೩, ಪು. ೨೮೯-೨೯೨.
50. ಚಿದಾನಂದಮೂರ್ತಿ ಎಂ., ಪೂರ್ವೋಕ್ತ.
51. ಎ. ಆಯ್. ಪೂರ್ವೋಕ್ತ. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ. ಗುರವ ಆರ್. ಎನ್., ಪೂರ್ವೋಕ್ತ.
52. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು. ೩೭೪.
53. ಎ. ಆಯ್. ಪೂರ್ವೋಕ್ತ. ಗುರವ ಆರ್. ಎನ್., ಪೂರ್ವೋಕ್ತ.

54. ಅದೇ.

55. ಗುರವ ಆರ್. ಎನ್., ಪೂರ್ವೋಕ್ತ.

56. ಅದೇ.

57. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ. ಗುರವ ಆರ್. ಎನ್., ಪೂರ್ವೋಕ್ತ.

58. ಅದೇ.

59. ಎ. ಆಯ್. ಪೂರ್ವೋಕ್ತ. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ. ಗುರವ ಆರ್. ಎನ್., ಪೂರ್ವೋಕ್ತ.

60. ಹಿರೇಮಠ ಬಿ. ಆರ್., ಶಾಸನಗಳಲ್ಲಿ ಕರ್ನಾಟಕದ ವರ್ತಕರು (೧೯೮೬), ಪು. ೪೧-೪೯.

61. ಗುರವ ಆರ್. ಎನ್., ಪೂರ್ವೋಕ್ತ.

62. ಎ. ಆಯ್. ಪೂರ್ವೋಕ್ತ. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ. ಗುರವ ಆರ್. ಎನ್., ಪೂರ್ವೋಕ್ತ.

63. ಗುರವ ಆರ್. ಎನ್., ಪೂರ್ವೋಕ್ತ.

64. ಇಚ್ಚಂಗಿ ರಾಜಶೇಖರ ಈ., ಪಾರ್ಶ್ವನಾಥ ಪುರಾಣ : ಒಂದು ತೌಲನಿಕ ಅಧ್ಯಯನ (೨೦೦೦), ಪು. ೧೩-೨೫.

65. ಕಲಬುರ್ಗಿ ಎಂ. ಎಂ., ಕನ್ನಡ ನಾಮವಿಜ್ಞಾನ, (೧೯೯೫), ಪು. ೫೫-೫೮ ಮತ್ತು ೬೦-೬೨. ವಿಶ್ವನಾಥ, ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ (೨೦೦೦), ಪು. ೧೮-೨೩.

66. ಎ. ಆಯ್. ಪೂರ್ವೋಕ್ತ. ಜೆ. ಬಿ. ಬಿ. ಆರ್. ಎ. ಎಸ್. ಪೂರ್ವೋಕ್ತ. ಗುರವ ಆರ್. ಎನ್., ಪೂರ್ವೋಕ್ತ.



# ಅಧ್ಯಾಯ : ನಾಲ್ಕು

# ಜೈನ ಬಸದಿಗಳು

## ೧. ಪೀಠಿಕೆ

ಜೈನ ಧರ್ಮದ ಗುಹಾಲಯ, ಸ್ತೂಪ, ಬಸದಿ, ಮಾನಸ್ತಂಭ, ಬ್ರಹ್ಮಸ್ತಂಭ, ಧ್ವಜಸ್ತಂಭ ಇತ್ಯಾದಿ ವಾಸ್ತುಕಲೆಗೆ ಸಂಬಂಧಿಸಿದ ನಿರ್ಮಾಣಗಳು ಸಮಕಾಲೀನ ಜೈನ ತತ್ವ-ಸಿದ್ಧಾಂತ, ಆಚಾರ-ವಿಚಾರ, ನಂಬುಗೆ-ಸಂಪ್ರದಾಯ ಮತ್ತು ಆಗಮಾದಿಗಳ ನಿರ್ದೇಶನಗಳ ಹಿನ್ನೆಲೆಯಲ್ಲಿ ಮೂಡಿಬಂದಿವೆ. ಹೀಗಾಗಿ ಭಾರತೀಯ ವಾಸ್ತುಕಲಾ ಪರಂಪರೆಯಲ್ಲಿ ಜೈನ ವಾಸ್ತುಕಲೆಗೆ ವಿಶೇಷವಾದ ಸ್ಥಾನವಿದೆ. ಜೈನ ಪರಂಪರೆಯಲ್ಲಿ ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು, ಜಿನಧರ್ಮ, ಜಿನಾಗಮ, ಜಿನಚೈತ್ಯ, ಜಿನಚೈತ್ಯಾಲಯ - ಇವು 'ನವದೇವತೆಗಳು' ಎಂದು ಪೂಜ್ಯನೀಯ ಸ್ಥಾನವನ್ನು ಪಡೆದಿವೆ. ಇವುಗಳಲ್ಲಿ ಜಿನಚೈತ್ಯಾಲಯವು ತೀರ್ಥಂಕರರು ಕೇವಲಜ್ಞಾನದ ತರುವಾಯ ಸಕಲ ಜೀವಿಗಳನ್ನುದ್ದೇಶಿಸಿ ಪ್ರಥಮೋಪದೇಶ ಕೈಗೊಳ್ಳುವ ಸಮವಸರಣ ಮಂಟಪದ ಪ್ರತಿನಿಧಿಯಾಗಿದೆ. ಈ ಜಿನಚೈತ್ಯಾಲಯವೇ ಸ್ತೂಪ ಮತ್ತು ಬಸದಿಗಳ ನಿರ್ಮಾಣಕ್ಕೆ ಪ್ರೇರಣೆಯಾಗಿದೆ. ಜೊತೆಗೆ ಅದರ ಪ್ರತಿಫಲನವೇ ಬಸದಿಗಳ ವಾಸ್ತು ರಚನೆಯಲ್ಲಿ ಮೂಡಿಬಂದಿದೆ.

ಜೈನ ಪರಂಪರೆಯ ಪ್ರಕಾರ ಪ್ರತಿಯೊಬ್ಬ ತೀರ್ಥಂಕರನಿಗೂ ಕೇವಲಜ್ಞಾನ ಪ್ರಾಪ್ತಿಯಾದ ತರುವಾಯ ಇಂದ್ರಾದಿದೇವತೆಗಳು ಭೂಮಿಗೆ ಆಗಮಿಸಿ ಆನಂದದಿಂದ ಕುಣಿಯುವರು. ಈ ಉತ್ಸವಕ್ಕೆ 'ಕೇವಲಜ್ಞಾನ ಕಲ್ಯಾಣ' ಎಂದು ಕರೆಯುತ್ತಾರೆ. ಇಂದ್ರನು ಅಂತರಿಕ್ಷದಲ್ಲಿ ವಿಶಿಷ್ಟ ವಿನ್ಯಾಸದ ಮಂಟಪವನ್ನು ರಚಿಸಲು ಕುಬೇರನಿಗೆ ಆದೇಶಿಸುತ್ತಾನೆ. ಆ ಮಂಟಪದ ಮಧ್ಯದಲ್ಲಿ ಗಂಧಕುಟಿ ಎಂಬ ಮಂಟಪ ಇರುತ್ತದೆ. ಅದರ ಸುತ್ತಲೂ ಏಕಕೇಂದ್ರೀಯವಾಗಿರುವ, ನಾಲ್ಕೂ ದಿಕ್ಕುಗಳಿಂದ ದ್ವಾರಗಳಿರುವ ಮೂರು ಗೋಡೆಗಳಿರುತ್ತವೆ. ಆ ಮಂಟಪವು ಮಾನಸ್ತಂಭಗಳು ಮತ್ತು ಧ್ವಜಸ್ತಂಭಗಳಿಂದ ಕೂಡಿರುತ್ತದೆ. ಗಂಧಕುಟಿ ಮಂಟಪವು ಅಂತರಿಕ್ಷದಲ್ಲಿರುವುದರಿಂದ ಅದನ್ನು ತಲುಪಲು ಹಲವು ಮೆಟ್ಟಿಲುಗಳನ್ನು ಏರಿ ಹೋಗಬೇಕಾಗುತ್ತದೆ. ತೀರ್ಥಂಕರನನ್ನು ದೇವತೆಗಳು ಕೊಂಡೊಯ್ದು ಗಂಧಕುಟಿಯ ಮಧ್ಯದಲ್ಲಿ ಸಿಂಹಪೀಠದ ಮೇಲಿನ ತಾವರೆಯ ಮೇಲೆ ಕುಳ್ಳಿರಿಸುತ್ತಾರೆ. ಅವನ ಹಿಂಭಾಗದಲ್ಲಿ ಚೈತ್ಯವೃಕ್ಷವನ್ನೂ, ಮುಕ್ಕೊಡೆಯನ್ನೂ ನೆಡಲಾಗುತ್ತದೆ. ತೀರ್ಥಂಕರನ ಪಾರ್ಶ್ವಗಳಲ್ಲಿ ಚಾಮರಧಾರಿಗಳು ನಿಲ್ಲುತ್ತಾರೆ. ಇದಾದ ಕೂಡಲೇ ಉಳಿದ ಮೂರೂ ದಿಕ್ಕುಗಳಿಗೆ ಮುಖಮಾಡಿ ತೀರ್ಥಂಕರನ ಪ್ರತಿಕೃತಿಗಳು ಮೂಡಿಕೊಳ್ಳುತ್ತವೆ. ನಂತರ ದೇವದುಂದುಭಿಗಳು ಮೊಳಗುತ್ತಿದ್ದಂತೆ ದಿವ್ಯಧ್ವನಿಯಲ್ಲಿ ತೀರ್ಥಂಕರನು ಧರ್ಮೋಪದೇಶ ಮಾಡುತ್ತಾನೆ. ಇಂದ್ರಾದಿದೇವತೆಗಳೂ, ತೀರ್ಥಂಕರನ ಶಿಷ್ಯರೂ, ಭಕ್ತಾದಿಗಳೂ, ಗೃಹಸ್ಥರೂ, ಪಶುಪಕ್ಷಿಗಳೂ ಸಮವಸರಣ ಮಂಟಪದಲ್ಲಿದ್ದು ಆ ಉಪದೇಶವನ್ನು ತಮ್ಮ ತಮ್ಮ ಭಾಷೆಗಳಲ್ಲಿಯೇ ಕೇಳಿಸಿಕೊಳ್ಳುತ್ತಾರೆ.[1]

ಭಾರತದಲ್ಲಿ ತೀರ್ಥಂಕರರ ಶಿಲ್ಪಗಳು ಮತ್ತು ಮುನಿಗಳ ಪಾದಚಿಹ್ನೆಗಳ ಪ್ರತಿಷ್ಠಾಪನೆ ಹಾಗೂ ಆರಾಧನೆ ಸಿಂಧೂ ನಾಗರಿಕತೆಯ ಕಾಲದಿಂದಲೂ ಗೋಚರಿಸುತ್ತವೆ.[2] ಆದರೆ ಅಂದು ಬಸದಿಗಳನ್ನು ನಿರ್ಮಿಸುವ ಪರಂಪರೆ ಪ್ರಚಲಿತದಲ್ಲಿರಲಿಲ್ಲ. ಬಸದಿಗಳ ನಿರ್ಮಾಣ ಪರಂಪರೆ ಆಗಮೋತ್ತರ ಕಾಲದಲ್ಲಿ ಪ್ರಾರಂಭವಾಯಿತು. ಪ್ರಾರಂಭದಲ್ಲಿ ಜೈನ ಮುನಿಗಳು ತಪಸ್ಸುಗೈಯಲು ಏಕಾಂತ ಸ್ಥಳಗಳಲ್ಲಿ ಅಂದರೆ ಬೆಟ್ಟ, ಗುಡ್ಡ, ಗುಹೆ, ಪೊಟರೆ,

ಸ್ಮಶಾನಗಳಲ್ಲಿ ವಾಸಿಸುತ್ತಿದ್ದರು. ಹೀಗಾಗಿ ನೈಸರ್ಗಿಕ ಗುಹೆಗಳೇ ಅವರ ತಪಸ್ಸಿನ ಕೇಂದ್ರಗಳಾಗಿದ್ದವು. ಅಂತಹ ಗುಹೆಗಳಲ್ಲಿ ಆ ಮುನಿಗಳು ತಮ್ಮ ವಂದನಾಭಕ್ತಿಗೆ ತೀರ್ಥಂಕರರ ಶಿಲ್ಪಗಳನ್ನು ಪ್ರತಿಷ್ಠಾಪಿಸುತ್ತಿದ್ದರು. ಆ ಗುಹೆಗಳೇ ಬಸದಿಗಳ ಪ್ರಾರಂಭದ ಪ್ರತಿನಿಧಿಗಳಾಗಿವೆ. ಅವುಗಳನ್ನೇ ಅಕೃತಿಮ ಚೈತ್ಯಾಲಯಗಳೆಂದು ಕರೆಯಲಾಗುತ್ತದೆ.[3]

ಬೌದ್ಧ ಧರ್ಮದಲ್ಲಿ ಪ್ರಚಲಿತದಲ್ಲಿದ್ದಂತೆ ಜೈನ ಧರ್ಮದಲ್ಲಿಯೂ ಮಹಾಪುರುಷರ ಅಂತ್ಯ ಸಂಸ್ಕಾರವಾದ ತರುವಾಯ ಅಸ್ಥಿಸಂಚಯನ ಮಾಡಿ ಅದನ್ನು ಕರಂಡಕದಲ್ಲಿರಿಸಿ ಭೂಮಿಯಲ್ಲಿ ತಗ್ಗು ತೋಡಿ ಅದರಲ್ಲಿ ಕರಂಡಕವನ್ನು ಇರಿಸಿ ಮಣ್ಣಿನಿಂದ ಮುಚ್ಚಿ ದಿಬ್ಬ ಮಾಡುವ ಪರಂಪರೆಯಿತ್ತು. ಇದನ್ನೇ ಸ್ತೂಪ ಎಂದು ಕರೆಯಲಾಗುತಿತ್ತು.[4] ಜೈನ ಪರಂಪರೆಯಲ್ಲಿಯೂ ಸ್ತೂಪಗಳನ್ನು ನಿರ್ಮಿಸಿ ಅವುಗಳನ್ನು ಪೂಜ್ಯಭಾವನೆಯಿಂದ ಕಾಣುವ ಸಂಪ್ರದಾಯ ಇತ್ತೆಂಬುದಕ್ಕೆ ಮಥುರಾದಲ್ಲಿದ್ದ ಸುಪಾರ್ಶ್ವನಾಥ ತೀರ್ಥಂಕರನ ಸ್ತೂಪ, ವೈಶಾಲಿಯಲ್ಲಿದ್ದ ಮುನಿಸುವ್ರತನಾಥ ತೀರ್ಥಂಕರನ ಸ್ತೂಪ, ಬಂಗಾಲದ ಪಹಾಡಪುರ, ಆಂಧ್ರಪ್ರದೇಶದ ವಡ್ಡಮಾನು ಮೊದಲಾದೆಡೆಗಳಲ್ಲಿದ್ದ ಸ್ತೂಪಗಳಿಂದ ಸ್ಪಷ್ಟವಾಗುತ್ತದೆ. ಇದಕ್ಕೆ ಪೂರಕವಾಗಿ ಹರಿಭದ್ರಸೂರಿಯ ಅವಶ್ಯಕ ನಿರ್ಯುಕ್ತಿ, ಜಂಬೂದೀವ ಪಣ್ಣತ್ತಿ, ಆವಶ್ಯಕಚೂರ್ಣಿ, ಜಿನಪ್ರಭಸೂರಿಯ ತೀರ್ಥಕಲ್ಪ, ಸೋಮದೇವಸೂರಿಯ ಯಶಸ್ತಿಲಕ ಚಂಪೂ, ಹರಿಷೇಣನ ಬೃಹತ್ಕಥಾಕೋಶ ಮೊದಲಾದ ಕೆಲವು ಆಗಮಗಳಲ್ಲಿ ತೀರ್ಥಂಕರರು ನಿರ್ವಾಣ ಹೊಂದಿದ ತರುವಾಯ ಅವರ ಪರೋಕ್ಷ ವಿನಯಾರ್ಥವಾಗಿ ಸ್ತೂಪಗಳನ್ನು ನಿರ್ಮಿಸಿದ್ದ ಪ್ರಸ್ತಾಪಗಳಿವೆ. ಸಮಕಾಲೀನ ಕೆಲವು ಶಾಸನಗಳಲ್ಲಿಯೂ (ಮಥರಾ, ಬಂಗಾಲದ ಪಹಾಡಪುರ ಇತ್ಯಾದಿ) ಜೈನ ಸ್ತೂಪಗಳ ಉಲ್ಲೇಖಗಳಿವೆ.[5] ಮಥುರಾದಲ್ಲಿದ್ದ ಸ್ತೂಪದ ಅಳಿದುಳಿದ ಅವಶೇಷಗಳ ಅಧ್ಯಯನದಿಂದ ಅದು ಸಮವಸರಣ ಮಂಟಪದ ಪರಿಕಲ್ಪನೆಯಲ್ಲಿ ನಿರ್ಮಾಣವಾಗಿತ್ತೆಂಬುದು ದೃಢಪಡುತ್ತದೆ.[6]

ಸ್ತೂಪಗಳ ಮುಂದಿನ ಹಂತವೇ ಬಸದಿಗಳಾಗಿವೆ. ಬಸದಿ ಎಂಬ ಪದವು ಮೂಲತಃ ವಸದಿಯ ರೂಪವಾಗಿದೆ. ವಸದಿಯು ಸಂಸ್ಕೃತದ ವಸತಿಯ ತದ್ಭವ ಪದವಾಗಿದೆ. ವಸತಿ ಪದವು ಜೈನ ಮುನಿಗಳು ವಾಸಮಾಡುತ್ತಿದ್ದ ಸ್ಥಳದ ಸೂಚಕವಾಗಿದೆ. ವಸತಿಯ ಮುಂದಿನ ಬೆಳವಣಿಗೆಯೇ ಬಸದಿಯಾಗಿದೆ. ಬಸದಿ ಪದಕ್ಕೆ ಸಮಾನಾರ್ಥಕವಾಗಿ ಜಿನಾಲಯ, ಕೊಯಿಲ್‌ವಸದಿ, ಚೈತ್ಯಾಲಯ, ಅರ್ಹಗೇಹ, ಅರ್ಹತ್ ದೇವಾಯತನ, ಜಿನಗೃಹ, ಕುಲಗಾಣ, ಚೇದಿತಿ, ಚೇದಿಯ, ಜಿನಗೇಹ, ಜಿನನಾಥಾವಾಸ, ಜಿನನಿಳಯ, ಜಿನಭವನ, ಜಿನಮಂದಿರ, ತೀರ್ಥೇಶವಾಸಂ ಮೊದಲಾದ ಪದಗಳು ಬಳಕೆಯಲ್ಲಿದ್ದವು.[7] ಜೈನಾಗಮಗಳಲ್ಲಿ ಬಸದಿಗಳ ನಿರ್ಮಾಣ ಪರಂಪರೆ ಅತೀ ಪ್ರಾಚೀನ ಕಾಲದಿಂದಲೂ ಗೋಚರಿಸುತ್ತದೆ. ೧ನೆಯ ತೀರ್ಥಂಕರ ಆದಿನಾಥನ ನಿರ್ವಾಣದ ತರುವಾಯ ಆತನ ಹಿರಿಯ ಪುತ್ರ ಭರತ ಚಕ್ರವರ್ತಿ ಕೈಲಾಸ ಪರ್ವತದಲ್ಲಿ ಒಂದು ಚೈತ್ಯ ಮತ್ತು ಸಿಂಹನಿಷಿದ್ಯ ಆಯತನವನ್ನು ನಿರ್ಮಿಸಿದನೆಂದು ಜಿನಸೇನಾಚಾರ್ಯನ ಪೂರ್ವಪುರಾಣದಲ್ಲಿ ಉಲ್ಲೇಖವಿದೆ.[8] ಇದೇ ರೀತಿ ಕ್ರಿ. ಪೂ. ಸುಮಾರು ೬-೫ನೆಯ ಶತಮಾನದ ಕೆಲವು ಜೈನ ಪ್ರಾಕೃತ ಕೃತಿಗಳಲ್ಲಿಯೂ ಆಯತನ, ಚೈತ್ಯಗೃಹ, ಬಿಂಬ, ಪ್ರತಿಮೆಗಳ ಉಲ್ಲೇಖಗಳಿವೆ.[9] ಆದರೆ ಆ ಪ್ರಾಚೀನ ನಿರ್ಮಾಣಗಳು ಉಳಿದು ಬಂದಿಲ್ಲ. ಕ್ರಿ. ಪೂ. ಸುಮಾರು ೩ನೆಯ ಶತಮಾನದಿಂದೀಚೆಗೆ ನಿರ್ಮಾಣವಾಗಿರುವ ಜೈನ ವಾಸ್ತು ರಚನೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

ತೀರ್ಥಂಕರರು ಪ್ರಥಮೋಪದೇಶ ಕೈಗೊಳ್ಳುವ ಸಮವಸರಣ ಮಂಟಪವು ಅಂತರಿಕ್ಷದಲ್ಲಿರುತ್ತದೆ. ಆ ಹಿನ್ನೆಲೆಯಲ್ಲಿ ಮೊದಮೊದಲಿನ ಜೈನ ಸ್ತೂಪ, ಗುಹಾಲಯ ಮತ್ತು ಬಸದಿಗಳು ಗುಡ್ಡಗಳ ನೆತ್ತಿಯಲ್ಲಿ ಹಾಗೂ ಎತ್ತರವಾದ ಪ್ರದೇಶದಲ್ಲಿ ನಿರ್ಮಾಣವಾಗಿವೆ. ಇದಕ್ಕೆ ಒರಿಸ್ಸಾದ ಭುವನೇಶ್ವರ ಸಮೀಪ ಉದಯಗಿರಿ-ಖಂಡಗಿರಿ,

ಮಹಾರಾಷ್ಟ್ರದ ಉಸ್ಮಾನಾಬಾದ ಮತ್ತು ಎಲ್ಲೋರ, ಬಿಹಾರದ ಗಯೆಯ ಸಮೀಪದ ಬರಾಬರ ಮತ್ತು ನಾಗಾರ್ಜುನೀ, ತಮಿಳುನಾಡಿನ ಉತ್ತರ ಆರ್ಕಾಡು ಪರಿಸರದಲ್ಲಿರುವ ವಳ್ಳಿಮಲೈ, ಸೀಯಮಂಗಲಂ, ತಿರುಮಲೈ, ತಿರುಕ್ಕೋಲ್, ಅರುಮಲೈ, ಕನ್ನಡ ನಾಡಿನ ಕೋಲಾರ ಜಿಲ್ಲೆಯ ನಂದಿಬೆಟ್ಟ, ಮಂಡ್ಯ ಜಿಲ್ಲೆಯ ಕನಕಗಿರಿ, ಮೇಲುಕೋಟೆ, ಬಾದಾಮಿ, ಐಹೊಳೆ, ಹಳ್ಳೂರ, ಶ್ರವಣಬೆಳಗೊಳ, ಹೊಂಬುಜ, ಮುಳಗುಂದ, ಕೊಪ್ಪಳ, ಯಲಬುರ್ಗಾ, ಸಿರಿಗೇರಿ, ವಕ್ಕುಂದ ಮೊದಲಾದೆಡೆಯಲ್ಲಿರುವ ಜೈನ ವಾಸ್ತು ನಿರ್ಮಾಣಗಳು ಉತ್ತಮ ನಿದರ್ಶನಗಳಾಗಿವೆ. ಈ ವಿಚಾರವನ್ನು ನೆಲಮಂಗಲ ತಾಲ್ಲೂಕಿನ ಮಣ್ಣೆಯ ಕ್ರಿ. ಶ. ೭೯೮ರ ಶಾಸನವು _

ಗ್ರಾಮೇ ಪುರೇ ನದೀತೀರೇ ಗಿರೌದ್ವೀಪೇ ಸರೋಂತಿಕೇ

ಪ್ರಾವರ್ತ್ತಯತ್ಸ್ವಕೀರ್ತ್ಯಾಭಾಮಯೋ ನೇಕಾಂ ವಸತಿಂ ಪ್ರಭುಃ ||

ಎಂದು ನದಿ ತೀರದಲ್ಲಿ, ಬೆಟ್ಟ-ಗುಡ್ಡಗಳ ಮೇಲೆ, ಕೆರೆಯ ದಡಗಳಲ್ಲಿ, ಊರು-ಕೇರಿಗಳಲ್ಲಿ, ಕಾಡು-ಮೇಡುಗಳಲ್ಲಿ ಬಸದಿಗಳು ನಿರ್ಮಾಣವಾಗುತ್ತಿದ್ದುದನ್ನು ಸ್ಪಷ್ಟಪಡಿಸುತ್ತದೆ.[10]

ಕನ್ನಡ ನಾಡಿನಲ್ಲಿ ಕ್ರಿ. ಪೂ. ಸುಮಾರು ೪ನೆಯ ಶತಮಾನದ ಪೂರ್ವದಿಂದಲೂ ಜೈನ ಧರ್ಮವು ಅಸ್ತಿತ್ವದಲ್ಲಿದೆ.[11] ಆದರೆ ಬಸದಿಗಳ ನಿರ್ಮಾಣ ಪರಂಪರೆ ಕ್ರಿಸ್ತಶಕಾರಂಭದಿಂದೀಚೆಗೆ ಪ್ರಾರಂಭವಾದಂತೆ ತೋರುತ್ತದೆ. ಈ ನಾಡಿನಲ್ಲಿ ಒಂದು ಐತಿಹಾಸಿಕ ಅಗತ್ಯವಾಗಿ ಹುಟ್ಟಿಕೊಂಡು ಜನಪರ ಕಾಳಜಿಗಳಿಗೆ ಸ್ಪಂದಿಸುವ ಜನಮುಖಿ ಮನೋಧರ್ಮಕ್ಕೆ ಬದ್ಧವಾಗಿದ್ದ ಯಾಪನೀಯ ಸಂಘವು ಕ್ರಿ. ಶ. ಸುಮಾರು ೪ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೂ ಪ್ರಚಲಿತದಲ್ಲಿತ್ತು. ಈ ಸಂಘದ ಮುನಿಗಳು, ಆರ್ಯಿಕೆಯರು, ಭಟ್ಟಾರಕರು ಬಸದಿಗಳ ನಿರ್ಮಾಣ ಪರಂಪರೆಗೆ ವಿಶೇಷವಾಗಿ ಪ್ರೇರಕರಾಗಿದ್ದಾರೆ. ಹಾಗಾಗಿಯೇ ಈ ನಾಡಿನ ಹೆಚ್ಚಿನ ಪ್ರಮಾಣದ ಬಸದಿಗಳು ಯಾಪನೀಯ ಸಂಘದ ವಿವಿಧ ಗಣ, ಗಚ್ಛ, ಅನ್ವಯ, ಬಳಿ ಪರಂಪರೆಗಳಿಗೆ ಸಂಬಂಧಿಸಿದ ವಿವರಗಳು ಸಮಕಾಲೀನ ಶಾಸನಗಳಲ್ಲಿ ಉಲ್ಲೇಖಿತವಾಗಿವೆ.[12] ಕನ್ನಡ ನಾಡನ್ನಾಳಿದ ಆಳರಸರಾದಿಯಾಗಿ ಅಧಿಕಾರಿಗಳು ಮತ್ತು ವರ್ತಕರು, ಜೈನಾಭಿಮಾನಿಗಳು, ಶ್ರಾವಕರು _

ಯಸ್ಮಿನ್ ಜಿನೇನ್ದ್ರ ಪೂಜಾಪ್ರವರ್ತ್ತತೇ
ತತ್ರತತ್ರ ದೇಶ ಪರಿವೃದ್ಧಿಃ ನಗರಾಣಾಂ ನಿರ್ಭಯತಾ
ತದ್ದೇಶ ಸ್ವಾಮಿನಾಂಚೋರ್ಜ್ಜಾ || ನಮೋ ನಮಃ ||

ಎಂದು ಎಲ್ಲಿ ಜಿನೇಂದ್ರನ ಪೂಜೆ ಜರುಗುತ್ತದೆಯೋ ಆ ದೇಶವೂ ವೃದ್ಧಿಸುತ್ತದೆ. ನಗರಗಳು ನಿರ್ಭಯದಿಂದ ಇರುತ್ತವೆ. ಆ ದೇಶದಲ್ಲಿ ಆಳ್ವಿಕೆಯನ್ನು ಕೈಗೊಂಡ ರಾಜನು ಊರ್ಜಿತನಾಗುತ್ತಾನೆ[13] ಎಂಬಿತ್ಯಾದಿ ಉಪದೇಶಗಳು ಹಾಗೂ ಜೈನ ಮುನಿಗಳು, ಭಟ್ಟಾರಕರು, ಕವಿಗಳ ಬೋಧನೆಗಳಿಂದ ಪ್ರೇರಿತರಾಗಿ ಸಾವಿರಾರು ಬಸದಿಗಳನ್ನು ನಿರ್ಮಿಸಿದ್ದಾರೆ. ಅದೇ ರೀತಿ ಜೈನ ಶ್ರಾವಕರು _

ಜಿನೇಂದ್ರ ಭವನೋದ್ಧಾರಂ ಪುಸ್ತಕಂ ತಥಾ |
ಸಂಘಶ್ಚತುರ್ವಿಧಶ್ಚೇತಿ ಸಂಪ್ರೋಕ್ತಂ ಕ್ಷೇತ್ರ ಸಪ್ತಕಂ ||

ಎಂಬ ಏಳು ತತ್ವಗಳನ್ನು ಹಾಗೂ_

ದೇವಪೂಜಾ ಗುರೂಪಾಸ್ತಿ ಸ್ವಾಧ್ಯಾಯಃ ತಪಃ |

ದಾನಂಚೇತಿ ಗೃಹಸ್ಥಾನಾಂ ಷಟ್‌ಕರ್ಮಾಣಿ ದಿನೇ ದಿನೇ ||

ಎಂದು ದೇವಪೂಜೆ, ಗುರುಗಳ ಸೇವೆ (ಪರಮಗುರು, ವಿದ್ಯಾಗುರು, ವಯೋಗುರು), ಶಾಸ್ತ್ರಗಳ ಅಧ್ಯಯನ, ಸಂಯಮ, ತಪಸ್ಸು, ದಾನ ಎಂಬ ಆರು ಕ್ರಿಯೆಗಳನ್ನು ಮೈಗೂಡಿಸಿಕೊಂಡು ಬಸದಿಗಳನ್ನು ನಿರ್ಮಿಸುವುದರೊಂದಿಗೆ ಜೈನ ಧರ್ಮವನ್ನು ಪೋಷಿಸಿ ಬೆಳೆಸಿದ್ದಾರೆ.

ಕನ್ನಡ ನಾಡಿನಲ್ಲಿ ಮೊದಮೊದಲು ಬಸದಿಗಳ ನಿರ್ಮಾಣದಲ್ಲಿ ಕಟ್ಟಿಗೆ ಮತ್ತು ಮಣ್ಣಿನ ಇಟ್ಟಿಗೆಗಳನ್ನು ಬಳಸಲಾಗುತ್ತಿತ್ತು.[14] ಹೀಗಾಗಿ ಆ ಬಸದಿಗಳು ಉಳಿದು ಬಂದಿಲ್ಲ. ಕ್ರಿ. ಶ. ಸುಮಾರು ೬ನೆಯ ಶತಮಾನದಿಂದೀಚಿನ ಅಂದರೆ ಬಾದಾಮಿ ಚಲುಕ್ಯರು ಮತ್ತು ತಲಕಾಡಿನ ಗಂಗ ಮನೆತನಗಳ ಕಾಲಾವಧಿಗಳಲ್ಲಿ ನಿರ್ಮಾಣವಾಗಿರುವ ಬಸದಿಗಳಿಂದಲೇ ಈ ನಾಡಿನಲ್ಲಿ ಬಸದಿಗಳ ವಾಸ್ತು ಅಧ್ಯಯನ ಸ್ಪಷ್ಟತೆಯನ್ನು ಪಡೆಯುತ್ತದೆ. ಈ ನಾಡಿನಲ್ಲಿ ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಮತ್ತು ಪಂಚಕೂಟ ತಲವಿನ್ಯಾಸಗಳಲ್ಲಿ ಬಸದಿಗಳು ನಿರ್ಮಾಣವಾಗಿವೆ. ಇವುಗಳ ಶಿಖರಗಳ ರಚನೆಯಲ್ಲಿ ದ್ರಾವಿಡ, ಫಾಂಸನಾ ಇತ್ಯಾದಿ ಶೈಲಿಗಳನ್ನು ಬಳಸಲಾಗಿದೆ. ತೀರ್ಥಂಕರರಿಗೆ ಕೇವಲಜ್ಞಾನ ಪ್ರಾಪ್ತಿಯಾದ ತರುವಾಯ ಇವರನ್ನು ಇಂದ್ರಾದಿದೇವತೆಗಳು ಸಮವಸರಣ ಮಂಟಪಕ್ಕೆ ಕೊಂಡೊಯ್ಯುವಾಗ ಅದರ ಉತ್ತರ ದಿಕ್ಕಿನ ದ್ವಾರದಿಂದ ಪ್ರವೇಶಿಸಿ ಅಲ್ಲಿ ಗಂಧಕುಟಿಯ ಮೇಲೆ ಪೂರ್ವಾಭಿಮುಖವಾಗಿ ಕುಳ್ಳಿರಿಸಿ ಕೇವಲಜ್ಞಾನ ಕಲ್ಯಾಣವನ್ನು ಆಚರಿಸುತ್ತಾರೆ. ಆ ಹಿನ್ನೆಲೆಯಲ್ಲಿ ಬಹುತೇಕ ಬಸದಿಗಳು ಉತ್ತರಾಭಿಮುಖವಾಗಿ ಇಲ್ಲವೇ ಪೂರ್ವಾಭಿಮುಖವಾಗಿ ನಿರ್ಮಾಣವಾಗಿವೆ.

ಕನ್ನಡ ನಾಡಿನ ಉದ್ದಗಲಕ್ಕೂ ಇರುವ ಬಹುತೇಕ ಬಸದಿಗಳು ಏಕಕೂಟ ತಲವಿನ್ಯಾಸದಲ್ಲಿವೆ. ಇವುಗಳಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳು ಪ್ರಧಾನವಾಗಿರುತ್ತವೆ. ಇಂತಹ ಬಸದಿಗಳು ಸಮವಸರಣ ಮಂಟಪದ ಯಾವುದಾದರೂ ಒಂದು ಪಾರ್ಶ್ವವನ್ನು ಪ್ರತಿನಿಧಿಸುತ್ತವೆ. ಇವುಗಳ ಗರ್ಭಗೃಹಗಳು ಸಮವಸರಣ ಮಂಟಪದ ಗಂಧಕುಟಿಯ ಸಂಕೇತವಾಗಿವೆ. ದ್ವಿಕೂಟ ತಲವಿನ್ಯಾಸದ ಬಸದಿಗಳಲ್ಲಿ ಎರಡು ಗರ್ಭಗೃಹಗಳು, ಎರಡು ಅಂತರಾಳಗಳು, ಎರಡೂ ಅಂತರಾಳಗಳಿಗೆ ಹೊಂದಿಕೊಂಡಂತೆ ಒಂದು ನವರಂಗ ಇಲ್ಲವೇ ಸಭಾಮಂಟಪ ಮತ್ತು ಒಂದು ಮುಖಮಂಟಪ ಇರುತ್ತವೆ.

ತ್ರಿಕೂಟ ತಲವಿನ್ಯಾಸದ ಬಸದಿಗಳಲ್ಲಿ ಮೂರು ಗರ್ಭಗೃಹಗಳು, ಮೂರು ಅಂತರಾಳಗಳು, ಮೂರೂ ಅಂತರಾಳಗಳಿಗೆ ಹೊಂದಿಕೊಂಡಂತೆ ಒಂದು ನವರಂಗ ಇಲ್ಲವೇ ಸಭಾಮಂಟಪ ಮತ್ತು ಒಂದು ಮುಖಮಂಟಪ ಇರುತ್ತವೆ. ಕನ್ನಡ ನಾಡಿನಲ್ಲಿ ಮಳಖೇಡದ ರಾಷ್ಟ್ರಕೂಟ ಮನೆತನದಿಂದೀಚೆಗೆ ತ್ರಿಕೂಟ ತಲವಿನ್ಯಾಸದ ಬಸದಿಗಳ ನಿರ್ಮಾಣ ಪರಂಪರೆ ಪ್ರಾರಂಭವಾಗಿದೆ. ಮುಳಗುಂದ, ಶ್ರವಣಬೆಳಗೊಳ, ಕೊಪ್ಪಳ, ಮೂಡಬಿದಿರೆ, ಗುಂಡಬಾಳ, ಚಿಕ್ಕಹನಸೋಗೆ, ಕಂಬದಹಳ್ಳಿ, ಸೊರಟೂರ, ಕಲ್ಹೊಳೆ, ಬಿಳಗಿ, ಕಾರ್ಕಳ, ಯಲ್ಲಾದಹಳ್ಳಿ, ಹಳೇಬಿಡು, ಪೊನ್ನವಾಡ ಮೊದಲಾದೆಡೆಗಳಲ್ಲಿ ತ್ರಿಕೂಟ ಬಸದಿಗಳಿವೆ. ಈ ಬಸದಿಗಳು ಸಮ್ಯಗ್ ಜ್ಞಾನ, ಸಮ್ಯಗ್ ದರ್ಶನ, ಸಮ್ಯಗ್ ಚಾರಿತ್ರ್ಯ ಎಂಬ ತ್ರಿರತ್ನತ್ರಯಗಳ ಪ್ರತೀಕವಾಗಿ ನಿರ್ಮಾಣವಾಗಿವೆ. ಹೀಗಾಗಿ ಇವುಗಳನ್ನು ಸಮಕಾಲೀನ ಶಾಸನಗಳು ಮತ್ತು ಸಾಹಿತ್ಯದಲ್ಲಿ ರತ್ನತ್ರಯ ಬಸದಿ, ತ್ರಿಕೂಟ ಜಿನಗೇಹ, ತ್ರಿಕೂಟ ರತ್ನತ್ರಯ ಬಸದಿ, ತ್ರಿಭುವನತಿಲಕ

ಬಸದಿ, ರತ್ನತ್ರಯರೂಪ ತ್ರಿಭುವನತಿಲಕ ಜಿನ ಚೈತ್ಯಾಲಯ ಎಂದಿತ್ಯಾದಿಯಾಗಿ ಕರೆಯಲಾಗಿದೆ. ಇಂತಹ ಬಸದಿಗಳಲ್ಲಿ ಇಪ್ಪತ್ನಾಲ್ಕು ತೀರ್ಥಂಕರರಲ್ಲಿ ಯಾರಾದರೂ ಮೂವರನ್ನು (ಶಾಂತಿನಾಥ, ಚಂದ್ರಪ್ರಭನಾಥ, ಪಾರ್ಶ್ವನಾಥ / ನೇಮಿನಾಥ, ಪಾರ್ಶ್ವನಾಥ, ಮಹಾವೀರ / ಆದಿನಾಥ, ಶಾಂತಿನಾಥ, ನೇಮಿನಾಥ) ಆಯ್ದುಕೊಂಡು ಪ್ರತಿಷ್ಠಾಪಿಸಲಾಗಿರುತ್ತದೆ.

ಚತುಷ್ಕೂಟ ತಲವಿನ್ಯಾಸದ ಬಸದಿಗಳಲ್ಲಿ ನಾಲ್ಕು ಗರ್ಭಗೃಹಗಳು, ನಾಲ್ಕು ಅಂತರಾಳಗಳು, ನಾಲ್ಕೂ ಅಂತರಾಳಗಳಿಗೆ ಹೊಂದಿಕೊಂಡಂತೆ ಒಂದು ಸಭಾಮಂಟಪ ಮತ್ತು ಒಂದು ಮುಖಮಂಟಪ ಇರುತ್ತವೆ. ಕನ್ನಡ ನಾಡಿನಲ್ಲಿ ಲಕ್ಷ್ಮೇಶ್ವರ, ಕಾರ್ಕಳ, ಗೇರುಸೊಪ್ಪೆ, ವರಾಂಗ, ಮಂಜೇಶ್ವರ ಮೊದಲಾದೆಡೆಗಳಲ್ಲಿ ಚತುಷ್ಕೂಟ ಬಸದಿಗಳಿದ್ದವು. ಅವುಗಳಲ್ಲಿ ಲಕ್ಷ್ಮೇಶ್ವರದ ಬಸದಿಯು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ. ಕೆಲವು ಶಾಸನಗಳಲ್ಲಿಯೂ ಚತುಷ್ಕೂಟ ಬಸದಿಗಳ ಉಲ್ಲೇಖಗಳು ದೊರೆಯುತ್ತವೆ. ಅವುಗಳನ್ನು ಸರ್ವತೋಭದ್ರ ಚತುರ್ಮುಖ ರತ್ನತ್ರಯರೂಪ ತ್ರಿಭುವನತಿಲಕ ಜಿನಚೈತ್ಯಾಲಯ, ಚತುರ್ಮುಖ ಬಸದಿ, ತೀರ್ತ್ಥದ ಬಸದಿ ಎಂದಿತ್ಯಾಗಿ ಕರೆಯಲಾಗಿದೆ. ತೀರ್ಥಂಕರರಿಗೆ ಕೇವಲಜ್ಞಾನದ ತರುವಾಯ ಅವರನ್ನು ಇಂದ್ರಾದಿದೇವತೆಗಳು ಸಮವಸರಣ ಮಂಟಪಕ್ಕೆ ಕೊಂಡೊಯ್ದು ಗಂಧಕುಟಿಯ ಮೇಲೆ ಪೂರ್ವಾಭಿಮುಖವಾಗಿ ಕುಳ್ಳಿರಿಸುತ್ತಾರೆ. ಕೂಡಲೇ ಉಳಿದ ಮೂರೂ ದಿಕ್ಕುಗಳಿಗೆ ಸರ್ವತೋಭದ್ರ ರೀತಿಯಲ್ಲಿ ಮುಖಮಾಡಿ ತೀರ್ಥಂಕರರ ಪ್ರತಿಕೃತಿಗಳು ಮೂಡಿಕೊಳ್ಳುತ್ತವೆ. ಆ ಹಿನ್ನೆಲೆಯಲ್ಲಿ ಚತುಷ್ಕೂಟ ತಲವಿನ್ಯಾಸದ ಬಸದಿಗಳು ನಿರ್ಮಾಣವಾಗಿವೆ. ಇಂತಹ ಬಸದಿಗಳಲ್ಲಿ ಇಪ್ಪತ್ನಾಲ್ಕು ತೀರ್ಥಂಕರರಲ್ಲಿ ಯಾರಾದರೂ ನಾಲ್ವರನ್ನು ಆಯ್ದುಕೊಂಡು ಪ್ರತಿಷ್ಠಾಪಿಸಲಾಗಿರುತ್ತದೆ. ಕೆಲವೊಮ್ಮೆ ಯಾರಾದರೂ ಇಬ್ಬರನ್ನು ಅಥವಾ ಒಬ್ಬರನ್ನು ಆಯ್ದುಕೊಂಡು ಪ್ರತಿಷ್ಠಾಪಿಸಲಾಗಿರುತ್ತದೆ.

ಪಂಚಕೂಟ ತಲವಿನ್ಯಾಸದ ಬಸದಿಗಳಲ್ಲಿ ಸಾಮಾನ್ಯವಾಗಿ ಐದು ಗರ್ಭಗೃಹಗಳು, ಐದು ಅಂತರಾಳಗಳು, ಐದೂ ಅಂತರಾಳಗಳಿಗೆ ಹೊಂದಿಕೊಂಡಂತೆ ಒಂದು ಸಭಾಮಂಟಪ ಮತ್ತು ಒಂದು ಮುಖಮಂಟಪ ಇರುತ್ತವೆ. ಕನ್ನಡ ನಾಡಿನಲ್ಲಿ ಹೂಲಿ, ಹೊಂಬುಜ, ಕಂಬದಹಳ್ಳಿ, ಹಾಡುವಳ್ಳಿ, ಕಾರ್ಕಳ ಮೊದಲಾದೆಡೆಗಳಲ್ಲಿ ಪಂಚಕೂಟ ಬಸದಿಗಳಿವೆ. ಶಾಸನಗಳಲ್ಲಿ ಇವುಗಳನ್ನು ಪಂಚಕೂಟ ಬಸದಿ, ಚೌವ್ವೀಸ ತೀರ್ಥಂಕರರ ಬಸದಿ, ಪಂಚವಸದಿ, ಮಾಣಿಕ್ಯತೀರ್ತ್ಥದ ಬಸದಿ ಎಂದಿತ್ಯಾಗಿ ಕರೆಯಲಾಗಿದೆ. ಇಂತಹ ಬಸದಿಗಳಲ್ಲಿ ಇಪ್ಪತ್ನಾಲ್ಕು ತೀರ್ಥಂಕರರಲ್ಲಿ ಯಾರಾದರೂ ಐವರನ್ನು ಆಯ್ದುಕೊಂಡು ಪ್ರತಿಷ್ಠಾಪಿಸಲಾಗುತ್ತಿತ್ತು. ಕನ್ನಡ ನಾಡಿನಲ್ಲಿ ಕ್ರಿ. ಶ. ಸುಮಾರು ೧೧ನೆಯ ಶತಮಾನದಿಂದೀಚೆಗೆ ಇಪ್ಪತ್ನಾಲ್ಕು ತೀರ್ಥಂಕರರನ್ನು ಕಾಯೋತ್ಸರ್ಗ ಮುದ್ರೆಯಲ್ಲಿ ಒಂದೆಡೆಗೆ ಪ್ರತಿಷ್ಠಾಪಿಸುವ ಪರಂಪರೆ ಆರಂಭವಾಯಿತು.[15] ಈ ಪರಂಪರೆಗೆ ಪಂಚಕೂಟ ತಲವಿನ್ಯಾಸದ ಬಸದಿಗಳನ್ನೂ ಬಳಸಿಕೊಂಡಿದ್ದಕ್ಕೆ ಹೂಲಿಯ ಪಂಚಕೂಟ ಬಸದಿ ಉತ್ತಮ ನಿದರ್ಶನವಾಗಿದೆ. ಇಪ್ಪತ್ನಾಲ್ಕು ತೀರ್ಥಂಕರರನ್ನು ಒಂದೆಡೆಗೆ ಪ್ರತಿಷ್ಠಾಪಿಸಿದ್ದ ಬಸದಿಗಳು ನರೇಗಲ್ಲ, ಲಕ್ಕುಂಡಿಗಳಲ್ಲಿಯೂ ಇದ್ದವೆಂಬುದಕ್ಕೆ ಈ ಗ್ರಾಮಗಳಲ್ಲಿ ಇಪ್ಪತ್ನಾಲ್ಕು ಶಿಲ್ಪಗಳು ಪ್ರತಿಷ್ಠಾಪಿಸಲ್ಪಟ್ಟಿದ್ದ ಕುಳಿಗಳಿರುವ ಏಕಶಿಲಾ ಪಾದಪೀಠದ ಕುರುಹುಗಳು ದೊರೆತಿವೆ. ಪ್ರಸ್ತುತ ಅಂತಹ ಬಸದಿಗಳಿಗೆ ಶ್ರವಣಬೆಳಗೊಳದ ಭಂಡಾರ ಬಸದಿ, ಮೂಡಬಿದಿರೆಯ ಅಮ್ಮನವರ ಬಸದಿ, ವೇಣೂರಿನ ಚತುರ್ವಿಂಶತಿ ಬಸದಿಗಳು ಉತ್ತಮ ನಿದರ್ಶನವಾಗಿವೆ.

ಕನ್ನಡ ನಾಡಿನ ಐಹೊಳೆಯ ಮೇಗುತಿ, ಹಳ್ಳೂರಿನ ಮೇಲ್ಗುಡಿ, ಪಟ್ಟದಕಲ್ಲಿನ ಜೈನ ನಾರಾಯಣ ಗುಡಿ, ಶ್ರವಣಬೆಳಗೊಳದ ಚಾವುಂಡರಾಯ, ಲಕ್ಕುಂಡಿಯ ಬ್ರಹ್ಮಜಿನಾಲಯ ಮೊದಲಾದ ಕೆಲವು ಬಸದಿಗಳಲ್ಲಿ ಗರ್ಭಗೃಹಗಳ ಮೇಲ್ಭಾಗ ಮತ್ತೊಂದು ಗರ್ಭಗೃಹಗಳನ್ನು ನಿರ್ಮಿಸಿರುವುದು ವಿಶೇಷ. ಸಮವಸರಣ ಮಂಟಪದಲ್ಲಿ ತೀರ್ಥಂಕರನು ಪ್ರಥಮೋಪದೇಶ ಕೈಗೊಳ್ಳುವ ಗಂಧಕುಟಿ ಮಂಟಪವು ಎತ್ತರದಲ್ಲಿರುತ್ತದೆ. ಆ ಪರಿಕಲ್ಪನೆಯಲ್ಲಿ ಈ ರೀತಿ ಒಂದು ಗರ್ಭಗೃಹದ ಮೇಲ್ಭಾಗದಲ್ಲಿ ಮತ್ತೊಂದು ಗರ್ಭಗೃಹವನ್ನು ನಿರ್ಮಿಸುವ ಪರಂಪರೆ ಮೂಡಿಬಂದಿದೆ. ಕನ್ನಡ ನಾಡಿನಲ್ಲಿ ನಕ್ಷತ್ರಾಕಾರದ ತಲವಿನ್ಯಾಸವನ್ನು ವಿಮಾನಕ್ಕೆ ಮೊದಲು ಅಳವಡಿಸುವ ಪರಂಪರೆ ಜೈನ ನಿರ್ಮಾಣಗಳಿಂದಲೇ ಪ್ರಾರಂಭವಾಗಿದೆ. ಇದಕ್ಕೆ ನರಗುಂದ ತಾಲ್ಲೂಕಿನ ಕೊಣ್ಣೂರಿನಲ್ಲಿ ರಾಷ್ಟ್ರಕೂಟ ಮನೆತನದ ಆಳ್ವಿಕೆಯ ಉತ್ತರಾರ್ಧದಲ್ಲಿ ನಿರ್ಮಾಣವಾಗಿರುವ ಬಸದಿ ಉತ್ತಮ ನಿದರ್ಶನ. ಈ ಬಸದಿಯು ಯಾವುದೋ ಒಂದು ಕಾಲಘಟ್ಟದಲ್ಲಿ ಶೈವ ಧರ್ಮದ ದೇವಾಲಯವಾಗಿ ಪರಿವರ್ತಿತವಾಗಿದೆ. ಇದನ್ನು ಈಗ ಪರಮೇಶ್ವರ ದೇವಾಲಯವೆಂದು ಕರೆಯುವರು. ಇದರ ಗರ್ಭಗೃಹದ ಹೊರವಿನ್ಯಾಸವು ಹದಿನಾರು ಕೋಣಗಳ ನಕ್ಷತ್ರಾಕಾರ ರೀತಿಯಲ್ಲಿದೆ. ಇದನ್ನು ಮಹಾಪದ್ಮ ಎಂದು ಕರೆಯಲಾಗುತ್ತದೆ. ಈ ವಿನ್ಯಾಸವು ಕಲ್ಯಾಣದ ಚಾಳುಕ್ಯ ಮನೆತನದ ಕಾಲದಲ್ಲಿ ಕ್ರಮೇಣ ಪ್ರಸಿದ್ಧವಾಗತೊಡಗಿ ದೋರಸಮುದ್ರದ ಹೊಯ್ಸಳ ಮನೆತನದ ಕಾಲಾವಧಿಯ ವಾಸ್ತು ರಚನೆಗಳಲ್ಲಿ ಪರಮೋನ್ನತಿ ಪಡೆಯಿತು.[16]



ಸಮವಸರಣ ಮಂಟಪದ ನಾಲ್ಕೂ ದ್ವಾರಬಂಧಗಳ ಮುಂಭಾಗಗಳಲ್ಲಿ ಒಂದೊಂದು ಮಾನಸ್ತಂಭ ಸ್ಥಾಪಿತವಾಗಿರುತ್ತವೆ. ಅವು ಆಕಾರದಲ್ಲಿ ವೃತ್ತಾಕಾರವಾಗಿದ್ದು ನಾಲ್ಕು ಗೋಪುರ ದ್ವಾರಗಳು, ಧ್ವಜಪತಾಕೆಗಳೂ ಇರುವ ಒಂದೊಂದು ಕೋಟೆಯಿಂದ ಸುತ್ತುವರೆದಿರುತ್ತವೆ. ಕೆಳಗಿನಿಂದ ಮೇಲಕ್ಕೆ ಕ್ರಮೇಣ ಚಿಕ್ಕ-ಚಿಕ್ಕದಾಗುತ್ತ ಹೋಗುವಂತಹ ಮೂರು ವೃತ್ತಾಕಾರದ ಇಲ್ಲವೇ ಚೌಕಾಕಾರದ ಪೀಠಗಳ ಮೇಲೆಯಿದ್ದು ಮೂರು ಖಂಡಗಳಲ್ಲಿ ವಿಭಜಿತವಾಗಿರುತ್ತವೆ. ತುದಿಯಲ್ಲಿ ಚೌಕಾಕಾರದ ರಚನೆಯಿದ್ದು ಇದರಲ್ಲಿ ಕ್ಷೇತ್ರಪಾಲ ಯಕ್ಷ ಇಲ್ಲವೇ ಚೌಮುಖ ತೀರ್ಥಂಕರರ ಶಿಲ್ಪಗಳಿರುತ್ತವೆ. ಈ ಸ್ತಂಭಗಳು ಸಮವಸರಣ ಮಂಟಪದ ಪ್ರತೀಕವಾಗಿರುವ ಬಸದಿಗಳನ್ನು ಭಕ್ತರು ಪ್ರವೇಶಿಸುವ ಮುನ್ನ ಅವರಲ್ಲಿರುವ ಕಷಾಯಗಳನ್ನು (ಕ್ರೋಧ, ಮಾನ, ಮಾಯಾ, ಲೋಭ) ದೂರ ಮಾಡಿ ಅವರಲ್ಲಿ ಧಾರ್ಮಿಕ ಶ್ರದ್ಧೆಯನ್ನುಂಟು ಮಾಡುತ್ತವೆ. ಹೀಗಾಗಿ ಇವುಗಳನ್ನು ಮಾನಸ್ತಂಭಗಳೆಂದು ಕರೆಯಲಾಗುತ್ತದೆ. ಇವುಗಳ ಎತ್ತರವು ಇವು ನಿರ್ಮಾಣವಾಗಿರುವ ಬಸದಿಗಳ ಗರ್ಭಗೃಹದಲ್ಲಿರುವ ತೀರ್ಥಂಕರನ ಶರೀರಾಕೃತಿಯ ಹನ್ನೆರಡು ಪಟ್ಟು ಎತ್ತರವಾಗಿರುತ್ತದೆ. ಕನ್ನಡ ನಾಡಿನ ಸಂದರ್ಭದಲ್ಲಿ ಮಾನಸ್ತಂಭಗಳ ನಿರ್ಮಾಣ ತಲಕಾಡಿನ ಗಂಗರು ಮತ್ತು ಮಳಖೇಡದ ರಾಷ್ಟ್ರಕೂಟರ ಕಾಲದಲ್ಲಿ ಆರಂಭವಾಯಿತು. ಕಲ್ಯಾಣ ಚಾಳುಕ್ಯರು ಮತ್ತು ದೋರಸಮುದ್ರ ಹೊಯ್ಸಳರ ಕಾಲದಲ್ಲಿ ಅಭಿವೃದ್ಧಿ ಹೊಂದಿ ವಿಜಯನಗರ ಮನೆತನದ ಕಾಲದಲ್ಲಿ ಉಚ್ಛ್ರಾಯ ಹಂತವನ್ನು ತಲುಪಿತು. ಅರ್ವಾಚೀನ ಬಸದಿಗಳ ಮುಂಭಾಗದಲ್ಲಿ ಮಾನಸ್ತಂಭಗಳ ನಿರ್ಮಾಣ ಸಾಮಾನ್ಯವಾಗಿದೆ.[17]

ಹೀಗೆ ಜೈನ ಧರ್ಮದ ವಾಸ್ತುಕಲೆಯಲ್ಲಿ ಸಮಕಾಲೀನ ಆಚಾರ-ವಿಚಾರಗಳು, ನಂಬುಗೆ-ಸಂಪ್ರದಾಯಗಳು ವಿಶಿಷ್ಟವಾಗಿ ಮೂಡಿಬಂದಿವೆ. ಹಾಗಾಗಿಯೇ ಈ ವಾಸ್ತುಕಲೆ ಭಾರತೀಯ ವಾಸ್ತುಕಲೆಯಲ್ಲಿ ಸ್ಫುಟ ವ್ಯಕ್ತಿತ್ವವನ್ನು ಹೊಂದಿ ತನ್ನದೇಯಾದ ಸ್ಪಷ್ಟತೆಯನ್ನು ಪಡೆದಿದೆ. ಗೋಕಾಕ ತಾಲೂಕಿನಲ್ಲಿ ಕ್ರಿ. ಶ. ಸುಮಾರು ೭ನೆಯ

ಶತಮಾನದಿಂದಲೂ ಬಸದಿಗಳ ನಿರ್ಮಾಣ ಪರಂಪರೆ ಬೆಳೆದು ಬಂದಿದೆ. ಈ ತಾಲೂಕಿನಲ್ಲಿ ವಿಹಾರದ ಮೂಲಕ ಧರ್ಮಪ್ರಸಾರಗೈದ ಯಾಪನೀಯ ಸಂಘ ಮತ್ತು ಮೂಲಸಂಘ ಪರಂಪರೆಗಳ ಮುನಿಗಳು, ಆರ್ಯಿಕೆಯರು, ಭಟ್ಟಾರಕರ ಪ್ರೇರಣೆಗಳಿಂದ ಪ್ರೇರಿತರಾದ ಸಮಕಾಲೀನ ಆಳರಸರಾದಿಯಾಗಿ ಅಧಿಕಾರಿಗಳು, ಶ್ರಾವಕರು ಅನೇಕ ಬಸದಿಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಇಂದು ಕೊಣ್ಣೂರ ಮತ್ತು ಕಲ್ಲೊಳೆಯ ಬಸದಿಗಳು ಮಾತ್ರ ಉಳಿದು ಬಂದಿವೆ. ಉಳಿದವುಗಳಲ್ಲಿ ಕೆಲವು ಯಾವುದೋ ಒಂದು ಕಾಲಘಟ್ಟದಲ್ಲಿ ಪರಿವರ್ತಿತವಾಗಿವೆ. ಮತ್ತೆ ಕೆಲವು ಸಮೂಲನಾಶವಾಗಿವೆ. ಈ ಎಲ್ಲ ಬಸದಿಗಳ ಕಾಲಮಾನ, ನಿರ್ಮಾತೃರು, ವಾಸ್ತು ಲಕ್ಷಣಗಳು ಮೊದಲಾದ ವಿವರಗಳು ಈ ಕೆಳಗಿನಂತಿವೆ.

## ೨. ಬಸದಿಗಳ ವಾಸ್ತು ಲಕ್ಷಣಗಳು

ಗೋಕಾಕ ತಾಲೂಕಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಅರಸು, ಮಹಾಮಂಡಳೇಶ್ವರ, ಮಹಾಸಾಮಂತ ಮೊದಲಾದ ಮನೆತನಗಳು ಮತ್ತು ಅಧಿಕಾರಿಗಳ ಆಳ್ವಿಕೆಯ ಕಾಲಾವಧಿಗಳಲ್ಲಿ ನಿರ್ಮಾಣವಾಗಿರುವ ಬಸದಿಗಳ ವಾಸ್ತು ಲಕ್ಷಣಗಳು ಈ ಕೆಳಗಿನಂತಿವೆ.

### ೨.೧. ಪಾರ್ಶ್ವನಾಥ ಬಸದಿ : ಕೊಣ್ಣೂರ

ಈ ಬಸದಿಯನ್ನು ಮಹಾಪ್ರಭು ನಿಧಿಯಮ ಗಾವುಂಡನು ಕ್ರಿ. ಶ. ಸುಮಾರು ೧೧ನೆಯ ಶತಮಾನದಲ್ಲಿ ನಿರ್ಮಿಸಿ ಇದರ ನಿರ್ವಹಣೆಗಾಗಿ ತನ್ನ ಮಾನ್ಯದೊಳಗಿನ ಭೂಮಿ, ಮನೆ, ಗಾಣ ಮತ್ತುತೋಟವನ್ನು ತಳವೃತ್ತಿಯಾಗಿ ಕೊಟ್ಟಿದ್ದಾನೆ. ಸವದತ್ತಿ ರಟ್ಟ ಮನೆತನದ ಇಮ್ಮಡಿ ಸೇನನು ಈ ಬಸದಿಗೆ ದರ್ಶನಕ್ಕಾಗಿ ಆಗಮಿಸಿದ್ದ ಸಂದರ್ಭದಲ್ಲಿ ಇದರ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ತನ್ನ ಸೀವಟದೊಳಗಿನ ಭೂಮಿಯನ್ನು ದಾನ ಮಾಡಿದ್ದಾನೆ. ಇದೇ ಬಸದಿಗೆ ಕಲ್ಯಾಣದ ಚಾಳುಕ್ಯ ಮನೆತನದ ೬ನೆಯ ವಿಕ್ರಮಾದಿತ್ಯನ ಪುತ್ರ ಜಯಕರ್ಣನು ಗದ್ಯಾಣವನ್ನು ದಾನ ಮಾಡಿದ್ದಾನೆ.[18]

ಕಪ್ಪುಮಿಶ್ರಿತ ಕೆಂಪು ಮರಳು ಶಿಲೆಗಳಲ್ಲಿ ಉತ್ತರಾಭಿಮುಖವಾಗಿ ನಿರ್ಮಾಣವಾಗಿರುವ ಈ ಬಸದಿಯ ತಲವಿನ್ಯಾಸವು ಗರ್ಭಗೃಹ, ಅಂತರಾಳ, ಸಭಾಮಂಟಪದಿಂದ ಕೂಡಿದೆ. ಈ ಬಸದಿಯು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗಿರುವುದರಿಂದ ಕೆಲವು ಪ್ರಾಚೀನ ಭಾಗಗಳು ತಮ್ಮ ಮೂಲ ವಾಸ್ತು ಸ್ವರೂಪವನ್ನು ಕಳೆದುಕೊಂಡಿವೆ. ಗರ್ಭಗೃಹವು ಚೌಕಾಕಾರವಾಗಿದೆ. ಇದರ ದ್ವಾರಬಂಧವು ತ್ರಿಶಾಖಾ ರೀತಿಯದಾಗಿದ್ದು ಇದರಲ್ಲಿ ಸ್ತಂಭಶಾಖೆ ಪ್ರಧಾನವಾಗಿದೆ. ಉತ್ತರಾಂಗಣದಲ್ಲಿ ಐದು ದ್ರಾವಿಡ ಶೈಲಿಯ ಶಿಖರಗಳ ಪ್ರತಿಕೃತಿಗಳಿವೆ. ಅಂತರಾಳದ ದ್ವಾರಬಂಧದ ಪಾರ್ಶ್ವಗಳಲ್ಲಿರುವ ಭಿತ್ತಿಗಂಬಗಳು ಭದ್ರಕ ಪ್ರಕಾರದ್ದಾಗಿವೆ. ಸಭಾಮಂಟಪವು ಸಂಪೂರ್ಣ ಜೀರ್ಣೋದ್ಧಾರವಾಗಿದೆ.

ಈ ಬಸದಿಯ ಅಧಿಷ್ಠಾನದಲ್ಲಿ ಖುರಕ, ಜಗತಿ, ಪದ್ಮ, ಅಂತರಿತ, ಕುಮುದ, ಕಪೋತ, ಮಕರಪಟ್ಟಿಕೆ ಭಾಗಗಳಿವೆ. ಮಕರ ಪಟ್ಟಿಕೆಯಲ್ಲಿ ಕೀರ್ತಿಮುಖ, ಮಕರಗಳು, ಮನುಷ್ಯರು ಇತ್ಯಾದಿ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಹೊರಭಿತ್ತಿಯು ಭದ್ರ ಮತ್ತು ಸಲಿಲಾಂತರಗಳಿಂದ ಕೂಡಿದೆ. ಭದ್ರಗಳಲ್ಲಿ ದ್ರಾವಿಡಕೂಟ ಮತ್ತು

ಸ್ತಂಭಕೋಷ್ಠಗಳ ಅಲಂಕಾರಗಳಿವೆ. ದ್ರಾವಿಡ ಕೂಟಗಳ ಮಧ್ಯದಲ್ಲಿ ಕಾಯೋತ್ಸರ್ಗದಲ್ಲಿರುವ ತೀರ್ಥಂಕರರ ಉಬ್ಬು ಶಿಲ್ಪಗಳಿವೆ. ಸ್ತಂಭಕೋಷ್ಠಗಳ ಮೇಲೆ ಲತಿನಕೂಟ ಮಾದರಿಯ ಅಲಂಕಾರಗಳಿವೆ. ಈ ಲತಿನಕೂಟದಲ್ಲಿ ಗವಾಕ್ಷದ ಅಲಂಕಾರಗಳಿವೆ. ಸಲಿಲಾಂತರಗಳಲ್ಲಿ ಮಕರತೋರಣದ ಅಲಂಕಾರಗಳಿವೆ. ಶಿಖರವು ಜೀರ್ಣೋದ್ಧಾರವಾಗಿದೆ.

ಈ ಬಸದಿಯಲ್ಲಿ ಸ್ಥಳೀಯ ಜೈನ ಧರ್ಮೀಯರು ಪ್ರತಿ ವರ್ಷ ವಿವಿಧ ಮಾಸಗಳಲ್ಲಿ ಮಹಾವೀರ ಜಯಂತಿ, ಶ್ರುತಪಂಚಮಿ, ಅಷ್ಟಾಹ್ನಿಕ ಪರ್ವ, ನೂಲ ಶ್ರಾವಣ ಹಬ್ಬ, ದಶಲಕ್ಷಣ ಪರ್ವ, ನೋಂಪಿಗಳು, ನಂದೀಶ್ವರ ಪರ್ವ, ಆಚಾರ್ಯ ೧೦೮ ಶ್ರೀ ಶಾಂತಿಸಾಗರ ಮುನಿ ಮಹಾರಾಜರ ಪುಣ್ಯ ತಿಥಿ ಮೊದಲಾದ ಹಬ್ಬ, ಉತ್ಸವ, ಆಚರಣೆಗಳನ್ನು ಆಚರಿಸುತ್ತಿದ್ದಾರೆ. ರಾಗ, ದ್ವೇಷ, ದುಃಖ, ದಾರಿದ್ರ್ಯ, ಕಷ್ಟಕಾರ್ಪಣ್ಯ, ರೋಗ-ರುಜಿನಾದಿಗಳು ಉತ್ಪತ್ತಿಯಾಗದಂತೆ ತಡೆಯುವ, ಪಾಪಕರ್ಮಗಳನ್ನು ನಾಶಮಾಡುವ ಹಾಗೂ ಸುಖ-ಶಾಂತಿ, ತೃಪ್ತಿ, ಸಾತ್ವಿಕತೆ, ಆರೋಗ್ಯ ಮುಂತಾದವುಗಳನ್ನು ದೊರಕಿಸುವ ದಿವ್ಯವಾದ ಔಷಧಿಯೇ ನೋಂಪಿಗಳು. ನೋಂಪಿ ಎಂಬುದು ಆಚರಣೆಯ ಮುಖಾಂತರ ಪ್ರಕಟವಾಗುವ ಧರ್ಮದ ಸ್ವರೂಪ. ಪೂಜಾರಾಧನೆಗಳು ಒಂದು ನಿರ್ದಿಷ್ಟವಾದ ಪರ್ವಗಳಲ್ಲಿ ಶಾಸ್ತ್ರೋಕ್ತವಾಗಿ ಕಟ್ಟುನಿಟ್ಟಿನಿಂದ ಆಚರಿಸಲ್ಪಡುತ್ತವೆ. ಇದು ಸತ್ಕಾಲಕ್ಷೇಪದ, ಸಜ್ಜನ ಸಂಗತಿಯ ಹಾಗೂ ಸುಸಂಸ್ಕೃತಿಯ ಪರಮಾವಧಿಯಾಗಿದೆ. ದಶಲಕ್ಷಣ ಪರ್ವ ಎಂಬುದು ಹತ್ತು ದಿನಗಳ ಒಂದು ಆಚರಣೆ. ಪ್ರತಿಯೊಂದು ದಿನವೂ ಧರ್ಮದ ಒಂದೊಂದಂಗದ ಅಭ್ಯಾಸ ಮತ್ತು ಆಚರಣೆಗಳನ್ನು ಮಾಡಲಾಗುತ್ತದೆ. ಉತ್ತಮ ಕ್ಷಮಾ, ಉತ್ತಮ ಮಾರ್ದವ, ಉತ್ತಮ ಆರ್ಜವ, ಉತ್ತಮ ಶೌಚ, ಉತ್ತಮ ಸತ್ಯ, ಉತ್ತಮ ಸಂಯಮ, ಉತ್ತಮ ತಪ, ಉತ್ತಮ ತ್ಯಾಗ, ಉತ್ತಮ ಆಕಿಂಚನ್ಯ, ಉತ್ತಮ ಬ್ರಹ್ಮಚರ್ಯ - ಈ ದಶಧರ್ಮಗಳ ಅಭ್ಯಾಸ ಮತ್ತು ಅನುಷ್ಠಾನಗಳಿಗೆ ಮೀಸಲಿಟ್ಟ ಕಾಲವಿದು. ಈ ಪರ್ವದಲ್ಲಿ ಬಸದಿಯಲ್ಲಿ ನಡೆಯುವ ಪೂಜೆಯು ಉದ್ಬೋಧಕವೂ ಶಾಂತಿಪ್ರಧಾನವೂ ಆಗಿರುತ್ತದೆ.

ಕಾರ್ತಿಕ, ಫಾಲ್ಗುಣ, ಆಷಾಢ ತಿಂಗಳುಗಳ ಕೊನೆಯ ಎಂಟು ದಿನಗಳಿಗೆ ಅಷ್ಟಾಹ್ನಿಕ ಪರ್ವದಿನಗಳೆನ್ನುವರು. ಇವು ಮೂರೂ ಮಹಾಪರ್ವಗಳೇ ಆಗಿವೆ. ಈ ದಿನಗಳಲ್ಲಿ ಬಸದಿಗಳಲ್ಲಿ ವಿಶೇಷ ಪೂಜೆ ಸಲ್ಲುತ್ತದೆ. ಈ ತಿಂಗಳುಗಳಲ್ಲಿ ಜೈನ ಧರ್ಮೀಯರು ಪವಿತ್ರ ತೀರ್ಥಗಳ ದರ್ಶನಕ್ಕೆ ಹೋಗುವರು. ಈ ಪರ್ವಗಳ ಆಚರಣೆಯು ದಶಲಕ್ಷಣ ಪರ್ವದಂತೆ ಈಗ ಸಾರ್ವತ್ರಿಕವಾಗಿ ಆಚರಣೆಯಲ್ಲಿಲ್ಲ. ಶ್ರುತಪಂಚಮಿಯು ಜೈನ ದರ್ಶನದ ದೃಷ್ಟಿಯಿಂದ ಅತ್ಯಂತ ಮಹತ್ವದ ದಿನವಾಗಿದೆ. ಇದು ಜೇಷ್ಠ ಶುದ್ಧ ಪಂಚಮಿಯ ದಿನ. ಅಂದು ಬಸದಿಗಳಲ್ಲಿ ಸರಸ್ವತಿಯ ಪೂಜೆಯನ್ನು ಮಾಡುವರು. ಶಾಸ್ತ್ರಗಳ ಪೂಜೆ ಮತ್ತು ಮೆರವಣಿಗೆಗಳನ್ನು ಮಾಡುತ್ತಾರೆ. ಪ್ರತಿನಿತ್ಯ ಮಾಡುವ ಪೂಜೆಗೆ ನಿತ್ಯಪೂಜೆಯೆಂದೂ ಪರ್ವಗಳಲ್ಲಿ ಮಾಡುವ ಪೂಜೆಗೆ ನೈಮಿತ್ತಿಕ ಪೂಜೆಯೆಂದೂ ಹೆಸರು. ಪೂಜೆ ಮಾಡುವ ಪೂಜಕನು ಶುಚಿರ್ಭೂತನಾಗಿ ಉತ್ತಮವಾದ ಪೂಜಾದ್ರವ್ಯಗಳಿಂದ ಪೂಜೆಯನ್ನು ಮಾಡುವುದು ನಿತ್ಯಪೂಜೆಯಾಗಿದೆ. ಪರ್ಯಂಕಾಸನದಲ್ಲಿ ಅಥವಾ ಕಾಯೋತ್ಸರ್ಗದಲ್ಲಿ, ಪೂರ್ವ ಅಥವಾ ಉತ್ತರಕ್ಕೆ ಮುಖಮಾಡಿ ಪೂಜೆಯನ್ನು ಮಾಡುತ್ತಾರೆ. ಅಂದರೆ ತೀರ್ಥಂಕರನ ಮುಖವು ಪೂರ್ವ ದಿಕ್ಕಿಗೆ ಇದ್ದರೆ ಪೂಜಕನು ಉತ್ತರ ದಿಕ್ಕಿಗೆ ಮುಖಮಾಡಿಯೂ, ತೀರ್ಥಂಕರನ ಮುಖವು ಉತ್ತರ ದಿಕ್ಕಿಗೆ ಇದ್ದರೆ ಪೂಜಕನು ಪೂರ್ವ ದಿಕ್ಕಿಗೆ ಮುಖಮಾಡಿಯೂ ಪೂಜೆಯನ್ನು ಮಾಡುತ್ತಾರೆ. ವೈಶಾಖ ಶುದ್ಧ ತೃತೀಯವು ಅಕ್ಷಯ ತೃತೀಯಾಗಿದೆ. ಈ ದಿನ ದಿಗಂಬರ ಮುನಿಗಳಿಗೆ

ಆಹಾರ ದಾನ ಮಾಡಿ ಪುಣ್ಯ ಪಡೆಯಬೇಕೆನ್ನುವ ಲವಲವಿಕೆ ಎಲ್ಲರಲ್ಲಿಯೂ ಜಾಗೃತವಾಗಲೆಂದು ಈ ಪರ್ವದಿನವನ್ನು ಆಚರಿಸುತ್ತಾರೆ. ಚೈತ್ರ ಶುದ್ಧ ತ್ರಯೋದಶಿಯಂದು ಮಹಾವೀರ ತೀರ್ಥಂಕರನ ಜಯಂತಿಯನ್ನು ಆಚರಿಸುತ್ತಾರೆ. ಅಂದು ಜೈನ ಧರ್ಮೀಯರು ತಮ್ಮ ಕೆಲಸ ಕಾರ್ಯಗಳನ್ನು ಬದಿಗಿಟ್ಟು ಮಹಾವೀರ ತೀರ್ಥಂಕರನ ಜಯಂತಿಯಲ್ಲಿ ಪಾಲ್ಗೊಳ್ಳುತ್ತಾರೆ. ಮಹಾವೀರ ತೀರ್ಥಂಕರನಿಗೆ ಜ್ಞಾನೋದಯದ ತರುವಾಯ ಮಗಧದ ರಾಜ್ಯಗೃಹ ನಗರದ ವಿಪುಲಾಚಲ ಪರ್ವತದಲ್ಲಿ ಪ್ರಪ್ರಥಮ ಧರ್ಮೋಪದೇಶ ನಡೆಯಿತು. ಅದರ ಸ್ಮರಣಾರ್ಥವಾಗಿ ಪ್ರತಿವರ್ಷ ಶ್ರಾವಣ ಬಹುಳ ಪಾಡ್ಯದಂದು ವೀರಶಾಸನ ಜಯಂತಿಯನ್ನು ಆಚರಿಸುತ್ತಾರೆ.

**೨.೨. ಶಾಂತಿನಾಥ ಬಸದಿ : ಕಲ್ಹೊಳೆ**

ಈ ಬಸದಿಯನ್ನು ಸವದತ್ತಿ ರಟ್ಟ ಮನೆತನದ ಸಂಬಂಧಿಕರಾದ ಹಗರಟೆಗೆ ನಾಡಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಯದುವಂಶದ ಇಮ್ಮಡಿ ರಾಜರಸನು ಕ್ರಿ. ಶ. ೧೨೦೪ರಲ್ಲಿ ನಿರ್ಮಿಸಿದ್ದಾನೆ. ಜೊತೆಗೆ ಇದಕ್ಕೆ ಬಂಗಾರದ ಕಳಸ, ಮಕರತೋರಣ, ಮಾನಸ್ತಂಭ ಮೊದಲಾದವುಗಳನ್ನು ಮಾಡಿಸಿ ಇದನ್ನು ತನ್ನ ಗುರುಗಳಾದ ಶುಭಚಂದ್ರ ಭಟ್ಟಾರಕರ ಸನ್ನಿಧಿಗೆ ಒಪ್ಪಿಸಿದನು. ರಟ್ಟ ಮನೆತನದ ಅನೆಯ ಕಾರ್ತವೀರ್ಯನು ಈ ಬಸದಿಗೆ ಭೂಮಿ, ಮನೆಯ ನಿವೇಶನ, ಗಾಣ, ಅಂಗಡಿ, ಹೂದೋಟವನ್ನು ದಾನ ಮಾಡಿದ್ದಾನೆ. ಅದೇ ಪ್ರಕಾರ ಈ ಬಸದಿಗೆ ಬೆಳಗಲೆ ಮುಖ್ಯವಾಗಿ ನಾಲ್ಕು ಪಟ್ಟಣದ ಸೆಟ್ಟಿಯರು ಮತ್ತು ಸಮಸ್ತ ಮುಮ್ಮುರಿದಂಡರು ಕೆಲವು ದಾನಗಳನ್ನು ಕೊಟ್ಟಿದ್ದಾರೆ.[19]

ಕಪ್ಪುಮಿಶ್ರಿತ ಕೆಂಪು ಮರಳು ಶಿಲೆಗಳಲ್ಲಿ ದಕ್ಷಿಣಾಭಿಮುಖವಾಗಿ ನಿರ್ಮಾಣವಾಗಿರುವ ಈ ಬಸದಿಯ ತಲವಿನ್ಯಾಸವು ಮೂರು ಗರ್ಭಗೃಹಗಳು, ಮೂರು ಅಂತರಾಳಗಳು, ಒಂದು ನವರಂಗ ಮತ್ತು ಒಂದು ಮುಖಮಂಟಪದಿಂದ ಕೂಡಿದೆ. ಮೂರೂ ಗರ್ಭಗೃಹಗಳು ಚೌಕಾಕಾರವಾಗಿವೆ. ಪ್ರಧಾನ ಗರ್ಭಗೃಹವು ದಕ್ಷಿಣಾಭಿಮುಖವಾಗಿದೆ. ಉಳಿದೆರಡು ಗರ್ಭಗೃಹಗಳು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿವೆ. ಪ್ರಧಾನ ಗರ್ಭಗೃಹದ ವಿತಾನವು ಅಷ್ಟಕೋನಾಕೃತಿಯಲ್ಲಿದ್ದು ಮಧ್ಯದಲ್ಲಿ ನಕ್ಷತ್ರಾಕಾರದ ಪದ್ಮಮಂಡಲದ ಅಲಂಕಾರವಿದೆ. ಇದರ ದ್ವಾರಬಂಧವು ತ್ರಿಶಾಖಾ ರೀತಿಯದಾಗಿದ್ದು ಇದರಲ್ಲಿ ಸ್ತಂಭಶಾಖೆ ಪ್ರಧಾನವಾಗಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದ ದ್ವಾರಬಂಧವು ಸ್ತಂಭ, ನಾಗ, ರತ್ನಗಳಿಂದ ಅಲಂಕೃತವಾಗಿರುವ ತ್ರಿಶಾಖೆಗಳಿಂದ ಕೂಡಿದೆ. ಇದರ ಉತ್ತರಾಂಗಣದಲ್ಲಿ ಐದು ರೇಖಾನಾಗರ ಶೈಲಿಯ ಶಿಖರಗಳ ಪ್ರತಿಕೃತಿಗಳಿವೆ. ಈ ಶಿಖರಗಳ ಮಧ್ಯದಲ್ಲಿ ಗವಾಕ್ಷಗಳ ಅಲಂಕಾರವಿದೆ. ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದ ದ್ವಾರಬಂಧದ ವಾಸ್ತು ಲಕ್ಷಣಗಳೂ ಪೂರ್ವಾಭಿಮುಖವಾಗಿರುವ ಗರ್ಭಗೃಹದ ದ್ವಾರಬಂಧದಂತಿವೆ. ಈ ಮೂರೂ ಗರ್ಭಗೃಹಗಳ ಮುಂಭಾಗಗಳಲ್ಲಿ ಅಂತರಾಳಗಳಿವೆ. ಇವುಗಳ ದ್ವಾರಬಂಧಗಳ ಪಾರ್ಶ್ವಗಳಲ್ಲಿ ಜಾಲಂಧ್ರಗಳನ್ನು ಅಳವಡಿಸಲಾಗಿದೆ.

ಮೂರೂ ಅಂತರಾಳಗಳಿಗೆ ಹೊಂದಿಕೊಂಡಂತೆ ನವರಂಗವಿದೆ. ಇದರ ಮಧ್ಯದಲ್ಲಿ ನಾಲ್ಕು ಸ್ವತಂತ್ರ ರುದ್ರಕಾಂತ ಪ್ರಕಾರದ ಸ್ತಂಭಗಳಿವೆ. ಇವು ಕ್ರಮವಾಗಿ ಪೀಠ, ಪಾದ, ದಂಡ, ಗ್ರೀವ, ಕಂಠ, ಫಲಕ, ಬೋದಿಗೆಯಿಂದ ಕೂಡಿವೆ. ಈ ಮಂಟಪದ ವಿತಾನವು ಅಷ್ಟಕೋನಾಕೃತಿಯಲ್ಲಿದ್ದು ಮಧ್ಯದಲ್ಲಿ ಪದ್ಮಮಂಡಲದ ಅಲಂಕಾರವಿದೆ. ಇದರ ಭಿತ್ತಿಗಳಲ್ಲಿ ಭದ್ರಕ ಪ್ರಕಾರದ ಹನ್ನೆರಡು ಅರ್ಧಗಂಬಗಳಿವೆ. ಪಾರ್ಶ್ವದ ಭಿತ್ತಿಗಳಲ್ಲಿ ಎರಡು

ದೇವಕೊಷ್ಠಗಳಿವೆ. ನವರಂಗದ ಮುಂಭಾಗದಲ್ಲಿ ಮುಖಮಂಟಪವಿದೆ. ಈ ಮಂಟಪದ ವಿತಾನವು ಸಮತಲವಾಗಿದ್ದು, ಸುತ್ತಲೂ ಇಳಿಜಾರಾದ ಚಜ್ಜವಿದೆ. ಈ ಮಂಟಪದಲ್ಲಿ ಸುತ್ತಲೂ ಕಕ್ಷಾಸನವಿದ್ದು, ಇದರ ಮೇಲೆ ಕಿರಿದಾದ ನಾಲ್ಕು ಸ್ತಂಭಗಳಿವೆ.

ಈ ಬಸದಿಯ ಅಧಿಷ್ಠಾನವು ಖುರಕ, ಜಗತಿ, ಪದ್ಮ, ಅಂತರಿತ, ಕುಮುದ, ಕಪೋತದಿಂದ ಕೂಡಿದೆ. ಕಪೋತ ಪಟ್ಟಿಯನ್ನು ನಾಸಿಗಳಿಂದ ಅಲಂಕರಿಸಲಾಗಿದೆ. ಭಿತ್ತಿಯು ಸರಳವಾಗಿದೆ. ಗರ್ಭಗೃಹಗಳ ಹೊರಭಿತ್ತಿಗಳಲ್ಲಿ ದೇವಕೋಷ್ಠಗಳಿವೆ. ಭಿತ್ತಿಯ ಮೇಲಿನ ಭಾಗವು ವಾರಂಡ ಮತ್ತು ಕಪೋತವನ್ನು ಹೊಂದಿದೆ. ಇವುಗಳ ಮೇಲಿನ ಭಾಗವು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗಿದೆ. ಪ್ರಧಾನ ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ. ಇದು ಆರು ಸ್ತರಗಳಿಂದ ಕೂಡಿದೆ. ಪ್ರತಿಯೊಂದು ಸ್ತರವನ್ನು ನಾಸಿಗಳಿಂದ ಅಲಂಕರಿಸಲಾಗಿದೆ. ಈ ಬಸದಿಯ ಹೊರಗಿನ ತಲವಿನ್ಯಾಸವು ಸಪ್ತರಥ ಮಾದರಿಯಲ್ಲಿದೆ. ಒಂದು ಕಾಲದಲ್ಲಿ ಪ್ರಸಿದ್ಧ ಜೈನ ಕೇಂದ್ರವಾಗಿದ್ದ ಕಲ್ಲೊಳೆ ಗ್ರಾಮದಲ್ಲಿ ಇಂದು ಬೆರಳೆಣಿಕೆಯಷ್ಟು ಜೈನ ಧರ್ಮೀಯರು ನೆಲೆಸಿದ್ದಾರೆ. ಇವರು ಪ್ರತಿದಿನ ಪ್ರಸ್ತುತ ಬಸದಿಗೆ ಆಗಮಿಸಿ ಪೂಜಾಧಿ ಧಾರ್ಮಿಕ ಚಟುವಟಿಕೆಗಳನ್ನು ಕೈಗೊಳ್ಳುತ್ತಿದ್ದಾರೆ. ಪ್ರತಿ ವರ್ಷದ ವಿವಿಧ ಮಾಸಗಳಲ್ಲಿ ಮಹಾವೀರ ಜಯಂತಿ, ನೂಲ ಶ್ರಾವಣ ಹಬ್ಬ, ದಶಲಕ್ಷಣ ಪರ್ವ ಇತ್ಯಾದಿ ಕೆಲವು ಹಬ್ಬಗಳನ್ನು ಕೈಗೊಳ್ಳುತ್ತಿದ್ದಾರೆ.

## ೩. ಪರಿವರ್ತಿತ, ಸಮೂಲನಾಶ ಮತ್ತು ಜೀರ್ಣೋದ್ಧಾರವಾಗಿರುವ ಬಸದಿಗಳು

ಜೈನ ಧರ್ಮಕ್ಕೆ ಆಶ್ರಯ-ಪ್ರೋತ್ಸಾಹ ನೀಡಿ ಪೋಷಿಸಿ ಬೆಳೆಸಿದ ಕದಂಬ, ಗಂಗ, ರಾಷ್ಟ್ರಕೂಟ, ಚಲ್ಲಕೇತನ, ಹೊಯ್ಸಳ, ರಟ್ಟ ಮೊದಲಾದ ಅರಸು, ಮಹಾಮಂಡಳೇಶ್ವರ ಮತ್ತು ನಾಳ್ಗಾವುಂಡ ಮನೆತನಗಳ ಪತನದ ತರುವಾಯದ ಕಾಲಾವಧಿಯಲ್ಲಿ ಇದಕ್ಕೆ ಮುಂಚೆ ದೊರೆಯುತ್ತಿದ್ದಂತಹ ಪ್ರಭುವರ್ಗದ ಬಲ, ಉತ್ತೇಜನ, ಆಶ್ರಯ-ಪ್ರೋತ್ಸಾಹಗಳು ಇಳಿಮುಖವಾಗುತ್ತ ಮುಂದುವರೆದು ಇದರ ಬೇರುಗಳು ಸಡಿಲುಗೊಳ್ಳಲಾರಂಭಿಸಿದವು.[20] ಕ್ರಿ. ಶ. ಸುಮಾರು ೧೨ನೆಯ ಶತಮಾನದಿಂದೀಚೆಗೆ ಜೈನ ಧರ್ಮೀಯರು ಮತ್ತು ಇವರ ಬಸದಿಗಳ ಮೇಲೆ ಕಾಳಾಮುಖ ಶೈವರು, ವೈಷ್ಣವರು, ಶ್ರೀವೈಷ್ಣವರು, ವೀರಶೈವರು, ಮುಸಲ್ಮಾನರು ಮತ್ತು ನವಾಬರು ನಡೆಸುತ್ತ ಬಂದ ಆಕ್ರಮಣಗಳಿಗೆ ಸಾವಿರಾರು ಜಿನಾಲಯಗಳು ನಾಶವಾದವು. ಇದಕ್ಕೆ ನಾಡಿನುದ್ದಕ್ಕೂ ದೊರೆಯುವ ಹಲವು ಶಿಲಾಶಾಸನಗಳು, ಪರಧರ್ಮೀಯರ ದೇವಾಲಯಗಳಾಗಿ, ಮಸೀದೆಗಳಾಗಿ ಪರಿವರ್ತಿತವಾಗಿರುವ ಹಾಗೂ ಅಜ್ಞಾನ ಧನಲೋಭಿಗಳು ನಿಧಿಯ ಆಸೆಗಾಗಿ ಅಗೆದು ಭಗ್ನಗೊಳಿಸಿರುವ ಅನೇಕ ಜೈನ ಸ್ಮಾರಕಗಳು, ಕೋಟೆ-ಕೊತ್ತಲಗಳು ಹಾಗೂ ಕೆಲವು ದೇವಾಲಯಗಳ ನಿರ್ಮಾಣಗಳಲ್ಲಿ ಉಪಯೋಗಿಸಲ್ಪಟ್ಟಿರುವ ಜೈನ ಶಾಸನಗಳು, ಶಿಲ್ಪಗಳು, ವಾಸ್ತು ಅವಶೇಷಗಳು ಮತ್ತು ಕೆಲವು ಪ್ರಾಚೀನ ಕೃತಿ-ಕಾವ್ಯಗಳಲ್ಲಿ ಕಂಡುಬರುವ ಸಂಘರ್ಷಣೆಯ ಉಲ್ಲೇಖಗಳು ಜ್ವಲಂತ ನಿದರ್ಶನಗಳಾಗಿವೆ.[21]

ಬಸದಿಗಳು ಸಮೂಲನಾಶವಾಗಿರುವುದಕ್ಕೆ ಮತದ್ವೇಷದ ದಳ್ಳುರಿಯೇ ಪ್ರಮುಖ ಕಾರಣವಾಗಿದ್ದರೂ ಕೆಲವೊಮ್ಮೆ ಇವುಗಳನ್ನು ಪಣಕ್ಕೊಡ್ಡಿ ಪರಧರ್ಮೀಯ ವಿದ್ವಾಂಸರೊಂದಿಗೆ (ದೇವರ ದಾಸಿಮಯ್ಯ, ಏಕಾಂತದ ರಾಮಯ್ಯ, ಆದಯ್ಯ, ಹಗರಟಿಗೆ ವಿರುಪರಸ, ವೀರಗೊಗ್ಗಿದೇವ ಇತ್ಯಾದಿ) ವಾದ-ವಿವಾದಗಳಲ್ಲಿ ಭಾಗವಹಿಸುತ್ತಿದ್ದ ಜೈನ ಧರ್ಮದ ವಿದ್ವಾಂಸರ ಸೋಲೂ ಕಾರಣವಾಗಿರುವಂತೆ ತೋರುತ್ತದೆ. ಇದೇ ರೀತಿ ಬಸದಿಗಳು ಪರಧರ್ಮೀಯರ ದೇವಾಲಯಗಳಾಗಿ ಪರಿವರ್ತಿತವಾಗಿರುವುದಕ್ಕೆ ಅವರ ಆಕ್ರಮಣಗಳೇ ಪ್ರಮುಖ ಕಾರಣವಾಗಿವೆ. ಕೆಲವೊಮ್ಮೆ

ಪ್ರಸಿದ್ಧ ಧಾರ್ಮಿಕ ಗುರುಗಳ ಪ್ರಭಾವ, ಒತ್ತಾಯ ಮತ್ತು ಪರಧರ್ಮೀಯರಿಂದ ತಮ್ಮ ಮೇಲಾಗುತ್ತಿದ್ದ ಹಿಂಸಾತ್ಮಕ ಆಕ್ರಮಣಗಳಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ ಸಾಮೂಹಿಕವಾಗಿ ಮತಾಂತರಕ್ಕೊಳಪಡುತ್ತಿದ್ದ ಜೈನ ಧರ್ಮೀಯರು ತಮ್ಮ ಬಸದಿಗಳು ನಿಷ್ಪ್ರಯೋಜಕವಾಗಿ ಉಳಿಯಬಾರದೆಂದು ತಾವೇ ಅವುಗಳನ್ನು ತಾವು ಮತಾಂತರಕ್ಕೊಳಪಟ್ಟ ಧರ್ಮದ ದೇವಾಲಯಗಳನ್ನಾಗಿ ಪರಿವರ್ತಿಸಿರಲೂಬಹುದು.[22] ಗೋಕಾಕ ತಾಲ್ಲೂಕಿನಲ್ಲಿಯೂ ಬೇರೆ ಧರ್ಮದ ದೇವಾಲಯವಾಗಿ ಪರಿವರ್ತಿತವಾಗಿರುವ, ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿರುವ ಮತ್ತು ಕಾಲಾಂತರದಲ್ಲಿ ಸಂಪೂರ್ಣ ಜೀರ್ಣೋದ್ಧಾರವಾಗಿರುವ ಕೆಲವು ಬಸದಿಗಳ ವಿವರಗಳು ದೊರೆಯುತ್ತವೆ.

**೩.೧. ಕಾಶಿ ಈಶ್ವರಲಿಂಗ ದೇವಾಲಯ : ಯಾದವಾಡ**

ಗೋಕಾಕ ತಾಲೂಕಿನ ಯಾದವಾಡ ಗ್ರಾಮದ ಪಿಂಜಾರ ಓಣಿಯಲ್ಲಿರುವ ಕಾಶಿ ಈಶ್ವರಲಿಂಗ ದೇವಾಲಯದ ವಾಸ್ತು ಲಕ್ಷಣಗಳನ್ನು ಗಮನಿಸಿದಾಗ ಇದು ಸವದತ್ತಿ ರಟ್ಟ ಮನೆತನದ ಆಳ್ವಿಕೆಯ ಕಾಲಾವಧಿಯಲ್ಲಿ ಅಂದರೆ ಕ್ರಿ. ಶ. ಸುಮಾರು ೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿರುವಂತೆ ತೋರುತ್ತದೆ. ಕೆಂಪು ಮರಳು ಶಿಲೆಗಳಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ಈ ದೇವಾಲಯದ ತಲವಿನ್ಯಾಸವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ದ್ವಾರಬಂಧವು ರತ್ನ, ಬಳ್ಳಿ, ಸ್ತಂಭಗಳಿಂದ ಅಲಂಕೃತವಾಗಿರುವ ತ್ರಿಶಾಖೆಗಳಿಂದ ಕೂಡಿದೆ. ಲಲಾಟ ಪಟ್ಟಿಯಲ್ಲಿ ಪರ್ಯಂಕಾಸನದಲ್ಲಿರುವ ತೀರ್ಥಂಕರನ ಉಬ್ಬು ಶಿಲ್ಪವಿದೆ. ಉತ್ತರಾಂಗಣದಲ್ಲಿ ಐದು ರೇಖಾನಾಗರ ಶೈಲಿಯ ಶಿಖರಗಳ ಪ್ರತಿಕೃತಿಗಳಿವೆ. ಅಂತರಾಳದಲ್ಲಿ ಗರ್ಭಗೃಹಕ್ಕೆ ಎದುರಾಗಿ ನಂದಿ ಶಿಲ್ಪವಿದೆ. ಇದರ ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ಇದರ ದ್ವಾರಬಂಧವು ರತ್ನ ಮತ್ತು ಸ್ತಂಭಗಳಿಂದ ಅಲಂಕೃತವಾಗಿರುವ ದ್ವಿಶಾಖೆಗಳಿಂದ ಕೂಡಿದೆ. ಲಲಾಟ ಪಟ್ಟಿಯಲ್ಲಿ ಪರ್ಯಂಕಾಸನದಲ್ಲಿರುವ ತೀರ್ಥಂಕರನ ಉಬ್ಬು ಶಿಲ್ಪವಿದೆ. ಉತ್ತರಾಂಗಣದಲ್ಲಿ ಐದು ರೇಖಾನಾಗರ ಶೈಲಿಯ ಶಿಖರಗಳ ಪ್ರತಿಕೃತಿಗಳಿವೆ. ಉತ್ತರಾಂಗಣದ ಮೇಲ್ಭಾಗದಲ್ಲಿ ಸಾಲಾಗಿ ಕಾಯೋತ್ಸರ್ಗದಲ್ಲಿರುವ ಇಪ್ಪತ್ನಾಲ್ಕು ತೀರ್ಥಂಕರರ ಚಿಕ್ಕ ಶಿಲ್ಪಗಳಿವೆ.[23]

ಈ ದೇವಾಲಯದ ನವರಂಗದ ಮಧ್ಯದಲ್ಲಿ ನಾಲ್ಕು ಸ್ವತಂತ್ರ ರುದ್ರಕಾಂತ ಪ್ರಕಾರದ ಸ್ತಂಭಗಳಿವೆ. ಇವು ಕ್ರಮವಾಗಿ ಪೀಠ, ಪಾದ, ದಂಡ, ಗ್ರೀವ, ಕಂಠ, ಫಲಕ, ಬೋದಿಗೆಯಿಂದ ಕೂಡಿವೆ. ಈ ಮಂಟಪದ ಪಾರ್ಶ್ವದ ಭಿತ್ತಿಗಳಲ್ಲಿ ಎರಡು ದೇವಕೊಷ್ಠಗಳಿವೆ. ಮುಖಮಂಟಪದಲ್ಲಿ ನಾಲ್ಕು ಸ್ವತಂತ್ರ ರುದ್ರಕಾಂತ ಪ್ರಕಾರದ ಸ್ತಂಭಗಳಿವೆ. ಇವು ಕ್ರಮವಾಗಿ ಪೀಠ, ಪಾದ, ದಂಡ, ಗ್ರೀವ, ಕಂಠ, ಫಲಕ, ಬೋದಿಗೆಯಿಂದ ಕೂಡಿವೆ. ಈ ಮಂಟಪದ ಸುತ್ತಲೂ ಇರುವ ಕಕ್ಷಾಸನವು ಭಗ್ನವಾಗಿದೆ. ಕಕ್ಷಾಸನದ ಮೇಲ್ಭಾಗದಲ್ಲಿ ಸುತ್ತಲೂ ಇಳಿಜಾರಾದ ಛಜ್ಜವಿದೆ. ಈ ದೇವಾಲಯದ ಹೊರಗಿನ ವಾಸ್ತು ಭಾಗಗಳು ಸಂಪೂರ್ಣ ಶಿಥಿಲವಾಗಿವೆ. ಹೀಗಾಗಿ ಇದರ ಹೊರಗಿನ ವಾಸ್ತು ಲಕ್ಷಣಗಳು ಅಸ್ಪಷ್ಟವಾಗಿವೆ. ಹೀಗೆ ಈ ದೇವಾಲಯದ ಗರ್ಭಗೃಹದ ದ್ವಾರಬಂಧದ ಲಲಾಟ ಪಟ್ಟಿಯಲ್ಲಿರುವ ತೀರ್ಥಂಕರನ ಉಬ್ಬುಶಿಲ್ಪ ಮತ್ತು ನವರಂಗದ ವಿತಾನದ ಅಡ್ಡ ತೊಲೆಗಳ ಮೇಲಿರುವ ತೀರ್ಥಂಕರರ ಶಿಲ್ಪಗಳ ಕುರುಹುಗಳು ಈ ದೇವಾಲಯವು ಮೂಲತಃ ಜೈನ ಧರ್ಮದ ಬಸದಿಯಾಗಿತ್ತು. ಯಾವುದೋ ಒಂದು ಕಾಲಘಟ್ಟದಲ್ಲಿ ಶೈವ ಧರ್ಮದ ದೇವಾಲಯವಾಗಿ ಪರಿವರ್ತಿತವಾಗಿರುವುದನ್ನು ದೃಢಪಡಿಸುತ್ತವೆ.

### ೩.೨. ಶಾಂತಿನಾಥ ಬಸದಿ : ಗೋಕಾಕ

ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನದಲ್ಲಿ ರಾಷ್ಟ್ರಕೂಟ ಮನೆತನದ ದೇಜ್ಜಮಹಾರಾಜನ ಪುತ್ರ ಇಂದ್ರನಂದಾದಿ ರಾಜನು ತನ್ನ ಮತ್ತು ತನ್ನ ಪೂರ್ವಜರ ಪುಣ್ಯಕೋಸ್ಕರ ಕಷ್ಮಾಂಡಿ ವಿಷಯದಲ್ಲಿದ್ದ ಜಳಾರ ಗ್ರಾಮದಲ್ಲಿ ಅರಹಂತ ತೀರ್ಥಂಕರನ ಪೂಜೆಗೆ ಭೂದಾನ ಮಾಡಿದ ವಿವರಗಳಿವೆ.[24] ಇದರಿಂದ ಗೋಕಾಕದಲ್ಲಿ ಕ್ರಿ. ಶ. ಸುಮಾರು ೬ನೆಯ ಶತಮಾನದಲ್ಲಿಯೇ ಬಸದಿ ಇತ್ತೆಂದು ಸ್ಪಷ್ಟವಾಗುತ್ತದೆ. ಪ್ರಸ್ತುತ ಶಾಸನದ ತಾಮ್ರಪಟಗಳನ್ನು ಬಂಧಿಸಿರುವ ಬಳೆಯ ಮುದ್ರೆಯ ಮೇಲೆ ಜಿಂಕೆಯನ್ನು ತೋರಿಸಿರುವುದು ಗಮನಾರ್ಹವಾಗಿದೆ. ೧೬ನೆಯ ತೀರ್ಥಂಕರ ಶಾಂತಿನಾಥನ ಲಾಂಛನ ಜಿಂಕೆಯಾಗಿದೆ. ಈ ಹಿನ್ನೆಲೆಯಲ್ಲಿ ಗೋಕಾಕದಲ್ಲಿದ್ದ ಬಸದಿ ಶಾಂತಿನಾಥನದ್ದಾಗಿತ್ತೆಂದು ಮನದಟ್ಟಾಗುವುದು. ಆ ಬಸದಿ ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

### ೩.೩. ಪಂಚಕೂಟ ಬಸದಿ : ಕಲ್ಲೊಳೆ

ಕಲ್ಲೊಳೆಯ ಕ್ರಿ. ಶ. ೧೨೦೪ರ ಶಾಸನದಲ್ಲಿ ಹಗರಟೆಗೆ ನಾಡಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಯದು ವಂಶದ ಇಮ್ಮಡಿ ರಾಜರಸನು ನಿರ್ಮಿಸಿದ್ದ ತ್ರಿಕೂಟಮಂಡಿತ ಶಾಂತಿನಾಥನ ಬಸದಿಗೆ ಸವದತ್ತಿ ರಟ್ಟ ಮನೆತನದ ೪ನೆಯ ಕಾರ್ತವೀರ್ಯನು ದಾನ ಮಾಡಿದ ಭೂಮಿಯ ಮೇರೆಗಳನ್ನು ಸೂಚಿಸಿರುವ ವಿವರಗಳಲ್ಲಿ ಪಂಚವಸದಿಯ ಪ್ರಸ್ತಾಪವಿದೆ.[25] ಪಂಚವಸದಿಯು ಪಂಚಕೂಟ ಬಸದಿಯ ಸೂಚನೆಯಾಗಿದೆ. ಹೀಗಾಗಿ ಇಂದಿನ ಕಲ್ಲೊಳೆಯ ಸುತ್ತಮುತ್ತಲಿನ ಪರಿಸರದ ಯಾವುದೋ ಒಂದು ಗ್ರಾಮದಲ್ಲಿ ಪಂಚಕೂಟ ತಲವಿನ್ಯಾಸದ ಬಸದಿ ಇತ್ತೆಂದು ಸ್ಪಷ್ಟವಾಗುತ್ತದೆ. ಆ ಬಸದಿಯೂ ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

### ೩.೪. ಬಸದಿ : ಕುಂದರಗಿ

ವಿಜಾಪುರ ಜಿಲ್ಲೆಯ ಹುನಗುಂದ ತಾಲೂಕಿನ ನಂದವಾಡಿಗೆಯ ಕ್ರಿ. ಶ. ೧೦೬೫ರ ಶಾಸನವು ಕಲ್ಯಾಣದ ಚಾಳುಕ್ಯ ಮನೆತನದ ಇಮ್ಮಡಿ ಸೋಮೇಶ್ವರನು ತನ್ನ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ದೇವಾಲಯಗಳನ್ನು, ಮಠಗಳನ್ನು, ಕೆರೆಗಳನ್ನು ನಿರ್ಮಿಸಿದ ಮತ್ತು ಜೀರ್ಣೋದ್ಧಾರಪಡಿಸಿದ ವಿವರಗಳನ್ನು ಪ್ರಸ್ತಾಪಿಸುತ್ತ ಕುಂದರಗೆ ಗ್ರಾಮದಲ್ಲಿದ್ದ ಬಸದಿಯನ್ನೂ ಜೀರ್ಣೋದ್ಧಾರಪಡಿಸಿದನೆಂದು ಉಲ್ಲೇಖಿಸಿದೆ.[26] ಕುಂದರಗೆ ಗ್ರಾಮವು ಇಂದಿನ ಗೋಕಾಕ ತಾಲೂಕಿನ ಕುಂದರಗಿ ಗ್ರಾಮ. ಈ ಗ್ರಾಮದಲ್ಲಿ ಮಾರ್ಕಂಡೇಯ ನದಿ ತೀರದಲ್ಲಿ ಜೀರ್ಣಾವಸ್ಥೆಯಲ್ಲಿರುವ ಸಂಗಮೇಶ್ವರ ದೇವಾಲಯವಿದೆ. ಇದು ಕ್ರಿ. ಶ. ಸುಮಾರು ೧೧ನೆಯ ಶತಮಾನದಲ್ಲಿ ನಿರ್ಮಾಣವಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮಂಟಪಗಳಿವೆ. ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ. ಈ ದೇವಾಲಯವು ಪರಿವರ್ತಿತ ಬಸದಿ ಎಂದು ಹೇಳಲಾಗುತ್ತದೆ.[27] ಆದರೆ ಈ ದೇವಾಲಯದ ವಾಸ್ತು ಲಕ್ಷಣಗಳಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಯಾವುದೇ ಕುರುಹುಗಳು ಗೋಚರಿಸುವುದಿಲ್ಲ.

**೩.೫. ಸುಪಾರ್ಶ್ವನಾಥ ಬಸದಿ : ಗೋಕಾಕ**

ಗೋಕಾಕದ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾದಪೀಠ ಶಾಸನವು ಸವದತ್ತಿ ರಟ್ಟ ಮನೆತನದ ಎರಗನು ಬಸದಿಯನ್ನು ನಿರ್ಮಿಸಿದನೆಂದು ಉಲ್ಲೇಖಿಸಿದೆ.[28] ಗೋಕಾಕ ನಗರದ ಮಧ್ಯದಲ್ಲಿರುವ ಇಂದಿನ ಸುಪಾರ್ಶ್ವನಾಥ ಬಸದಿಯ ಸ್ಥಳದಲ್ಲಿಯೇ ಎರಗನು ನಿರ್ಮಿಸಿದ್ದ ಪ್ರಾಚೀನ ಬಸದಿಯಿತ್ತು. ಅದು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗುತ್ತ ಇಂದು ಸಂಪೂರ್ಣ ನೂತನ ಸ್ಥಿತಿಯನ್ನು ಪಡೆದಿದೆ. ಈ ಬಸದಿಯಲ್ಲಿರುವ ಪ್ರಸ್ತುತ ಪಾದಪೀಠ ಶಾಸನವಿರುವ ಸುಪಾರ್ಶ್ವನಾಥ ತೀರ್ಥಂಕರನ ಶಿಲ್ಪವೇ ಆ ಬಸದಿಯ ಗರ್ಭಗೃಹದಲ್ಲಿ ಪ್ರತಿಷ್ಠಾಪಿತವಾಗಿದ್ದಂತೆ ತೋರುತ್ತದೆ. ಇಂದಿನ ನೂತನ ಬಸದಿಯಲ್ಲಿ ವರ್ಷಂಪ್ರತಿ ವಿವಿಧ ಮಾಸಗಳಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

ಹೀಗೆ ಗೋಕಾಕ ತಾಲೂಕಿನಲ್ಲಿ ಕ್ರಿ. ಶ. ಸುಮಾರು ೬ನೆಯ ಶತಮಾನದಿಂದಲೂ ಬಸದಿಗಳ ನಿರ್ಮಾಣ ಪರಂಪರೆ ಅವಿಚ್ಛಿನವಾಗಿ ಬೆಳೆದು ಬಂದಿದೆ. ಪ್ರಸ್ತುತ ಕಲ್ಲೊಳೆ ಮತ್ತು ಕೊಣ್ಣೂರದ ಬಸದಿಗಳು ಮಾತ್ರ ಮೂಲ ವಾಸ್ತು ಸ್ವರೂಪದಲ್ಲಿ ಉಳಿದು ಬಂದಿವೆ. ಕಲ್ಲೊಳೆಯ ತ್ರಿಕೂಟಮಂಡಿತ ಶಾಂತಿನಾಥನ ಬಸದಿಯು ಕನ್ನಡ ನಾಡಿನ ಬಸದಿಗಳ ವಿನ್ಯಾಸಗಳು ಮತ್ತು ಶೈಲಿಗಳ ಅಧ್ಯಯನಕ್ಕೆ ಮಹತ್ವದ ಕೊಡುಗೆಯಾಗಿದೆ. ಕಳೆದ ಶತಮಾನದಿಂದೀಚೆಗೆ ಗೋಕಾಕ ತಾಲೂಕಿನಲ್ಲಿ ಜೈನ ಧರ್ಮೀಯರು ನೆಲೆಸಿರುವ ಬಹುತೇಕ ಗ್ರಾಮಗಳಲ್ಲಿ ನೂತನ ಬಸದಿಗಳು ನಿರ್ಮಾಣವಾಗಿವೆ ಮತ್ತು ನಿರ್ಮಾಣವಾಗುತ್ತಿವೆ. ಒಟ್ಟಾರೆ ಜೈನ ಧರ್ಮದ ವಾಸ್ತುಕಲೆಯ ಪ್ರಾರಂಭ, ಬೆಳವಣಿಗೆ ಮೊದಲಾದ ವಿಚಾರಗಳ ಅಧ್ಯಯನಕ್ಕೆ ಗೋಕಾಕ ತಾಲೂಕಿನ ಕೊಡುಗೆ ಮೇಲ್ನೋಟಕ್ಕೆ ಅಲ್ಪವೆನಿಸಿದರೂ ಅಪರೂಪದ್ದಾಗಿದೆ.

## ಅಡಿಟಿಪ್ಪಣಿಗಳು

1. ಪಾಡಿಗಾರ ಶ್ರೀನಿವಾಸ, "ಭಾರತೀಯ ವಾಸ್ತು-ಶಿಲ್ಪಕ್ಕೆ ಜೈನರ ಕೊಡುಗೆ", ಜಿನತಿಲಕ (೨೦೦೪), ಗಾಳಿ ಶಿವಾನಂದ ಮತ್ತು ಶ್ರೀಧರ ಹೆಗಡೆ ಭದ್ರನ್ (ಸಂ.), ಪು. ೧೦೪-೧೧೪.
2. ಪ್ರಧಾನ ಗುರುದತ್ತ (ಅನು.), ಮೊಹೆಂಜೊದಾರೋ : ಜೈನ ಪರಂಪರೆ ಮತ್ತು ಸಾಕ್ಷ್ಯಗಳು (೧೯೮೬), ಪು. XVIII.
3. ಹಂಪ ನಾಗರಾಜಯ್ಯ, ಶಾಸನಗಳಲ್ಲಿ ಬಸದಿಗಳು (೧೯೯೮), ಪು. ೧-೩.
4. ಪಾಡಿಗಾರ ಶ್ರೀನಿವಾಸ, ಪೂರ್ವೋಕ್ತ, ಪು. ೧೦೫.
5. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪು. ೧೫-೧೬.
6. ಪಾಡಿಗಾರ ಶ್ರೀನಿವಾಸ, ಪೂರ್ವೋಕ್ತ, ಪು. ೧೦೬.
7. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪು. ೨೦-೨೧.
8. ಮಿರ್ಜಿ ಅಣ್ಣಾರಾಯ (ಅನು.), ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ (೧೯೮೧), ಪು. ೩೭೧.
9. ಶೆಟ್ಟಿ ಎಸ್. ಡಿ., ತುಳುನಾಡಿನ ಜೈನಧರ್ಮ : ಒಂದು ಸಾಂಸ್ಕೃತಿಕ ಅಧ್ಯಯನ (೨೦೦೨), ಪು. ೧೯-೨೨.
10. ಎ. ಕ. ಸಂ. IX, ಶಾ. ಸಂ. ೬೦.
11. ಹಂಪೆ ಅಪ್ಪಣ್ಣ ಎನ್., "ಸಾಹಿತ್ಯ ಮತ್ತು ಶಾಸನಗಳಲ್ಲಿ ಭದ್ರಬಾಹು ಭಟ್ಟಾರಕರು ಮತ್ತು ಚಂದ್ರಗುಪ್ತ", ಅರವಂಟಿಗೆ ಸಂ. ೧/೧ (ಜೂನ್-೨೦೦೮), ಪು. ೧೦-೧೯.

12. ಹಂಪ ನಾಗರಾಜಯ್ಯ, ಯಾಪನೀಯ ಸಂಘ (೧೯೯೯), ಪು. ೭೪-೭೬.
13. ಆಯ್. ಎ. ಸಂ VI, ಶಾ. ಸಂ. ೨೨.
14. ಹಂಪ ನಾಗರಾಜಯ್ಯ, ಶಾಸನಗಳಲ್ಲಿ ಬಸದಿಗಳು (೧೯೯೮), ಪು. ೧೭-೧೮.
15. ಪಾಡಿಗಾರ ಶ್ರೀನಿವಾಸ, "ಸಮ್ ಆಸ್ಪೇಕ್ಟ್ಸ್ ಆಫ್ ಜಿನ-ಚೈತ್ಯಾಲಯಸ್ ಆಫ್ ಕರ್ನಾಟಕ", ಕಲಾ (ದಿ ಜರ್ನಲ್ ಆಫ್ ಇಂಡಿಯನ್ ಆರ್ಟ್ ಹಿಸ್ಟಿ ಕಾಂಗ್ರೇಸ್, ವಾಲ್ಯೂಮ್ XII-೨೦೦೬), ಪು. ೪೮-೪೩.
16. ಪಾಡಿಗಾರ ಶ್ರೀನಿವಾಸ, ಪೂರ್ವೋಕ್ತ, ಪು. ೧೦೮.
17. ಹಂಜೆ ಅಪ್ಪಣ್ಣ ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ (೨೦೦೮), ಪು. ೫೫-೫೬.
18. ಜೆ. ಬಿ. ಬಿ. ಆರ್. ಎ. ಎಸ್. ಸಂ. X, ಪು. ೨೮೭-೨೯೨.
19. ಗುರವ ಆರ್. ಎನ್., "ಪಾರ್ಶ್ವಪಂಡಿತನ ಕಲ್ಹೊಳೆಯ ಶಾಸನ", ಕರ್ನಾಟಕ ಭಾರತಿ ಸಂ. ೬/೩ (ಜನೇವರಿ-೧೯೭೪), ಪು. ೪೩-೫೪,
20. ಕಲಬುರ್ಗಿ ಎಂ. ಎಂ., "ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳ ನಾಶ", ಮಾರ್ಗ ಸಂ. ೩ (೧೯೯೮), ಪು. ೪೦.
21. ಹಂಜೆ ಅಪ್ಪಣ್ಣ ಎನ್., "ಜಿನಾಲಯಗಳು : ನಾಶ, ರೂಪಾಂತರ, ಜೀರ್ಣೋದ್ಧಾರ ಮತ್ತು ಪ್ರತಿಬದ್ಧ", (ಅಚ್ಚಿನಲ್ಲಿದೆ).
22. ಅದೇ.
23. ಈ ರೀತಿ ನವರಂಗ, ಮುಖಮಂಟಪ, ಮಹಾಮಂಟಪಗಳ ವಿತಾನಗಳ ಅಡ್ಡ ತೊಲೆಗಳ ಮೇಲೆ ಸಾಲಾಗಿ ಇಪ್ಪತ್ನಾಲ್ಕು ಇಲ್ಲವೇ ಎಪ್ಪತ್ತೆರಡು ತ್ರಿಕಾಲ ತೀರ್ಥಂಕರರು ತೀರ್ಥಂಕರರ ಶಿಲ್ಪಗಳನ್ನು ತೋರಿಸುವುದು ಸವದತ್ತಿ ರಟ್ಟರ ಕಾಲಾವಧಿಯಲ್ಲಿ ನಿರ್ಮಾಣವಾಗಿರುವ ಬಸದಿಗಳ ವಾಸ್ತು ಲಕ್ಷಣಗಳಲ್ಲಿ ವಿಶೇಷವಾಗಿದೆ. ಇಂತಹ ಲಕ್ಷಣಗಳನ್ನು ಬೆಳಗಾವಿಯ ಕಮಲ ಬಸದಿಯ ಮಹಾಮಂಟಪದ ವಿತಾನದಲ್ಲಿ ಮತ್ತು ಬೈಲಹೊಂಗಲ ತಾಲೂಕಿನ ನೇಸರಗಿಯ ವಿರೂಪಾಕ್ಷ ದೇವಾಲಯದ ನವರಂಗದ ವಿತಾನದಲ್ಲಿ ಕಾಣಬಹುದು. ನೇಸರಗಿಯ ವಿರೂಪಾಕ್ಷ ದೇವಾಲಯವು ಮೂಲತಃ ಬಸದಿಯಾಗಿತ್ತು. ಯಾವುದೋ ಒಂದು ಕಾಲಘಟ್ಟದಲ್ಲಿ ಶೈವ ಧರ್ಮದ ದೇವಾಲಯವಾಗಿ ಪರಿವರ್ತಿತವಾಗಿದೆ.
24. ಎ. ಆಯ್. ಸಂ. XXI, ಶಾ. ಸಂ. ೪೩, ಪು. ೨೮೯-೨೯೨.
25. ಗುರವ ಆರ್. ಎನ್., ಪೂರ್ವೋಕ್ತ.
26. ಎಸ್. ಆಯ್. ಆಯ್. ಸಂ. XI-I, ಶಾ.ಸಂ ೧೦೩.
27. ಹಂದೂರ ಬಿ. ಆರ್., ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ (೨೦೦೩), ಪು. ೧೩೪-೧೩೫.
28. ತಬೋಜಿ ಚಂದ್ರಶೇಖರ ಬಿ., "ಕೊಣ್ಣೂರಿನ ಜಿನಬಿಂಬ ಶಾಸನ", ಶಾಸನ ಅಧ್ಯಯನ ಸಂ. ೨ (೨೦೦೪), ಪು. ೨೦-೨೧,



## ಅಧ್ಯಾಯ : ಐದು

# ಜೈನ ಶಿಲ್ಪಗಳು

### ೧. ಪೀಠಿಕೆ

ಅಹಿಂಸೆ, ವೈರಾಗ್ಯ, ತ್ಯಾಗ, ಅಪರಿಗ್ರಹ, ಅನೇಕಾಂತವಾದ ಮೊದಲಾದ ತತ್ವ-ಸಿದ್ಧಾಂತಗಳನ್ನು ಜಗತ್ತಿಗೆ ಪರಿಚಯಿಸಿರುವ ಜೈನ ಧರ್ಮದ ಶಿಲ್ಪಕಲಾ ಪರಂಪರೆ ಬಹು ವೈಶಿಷ್ಟ್ಯತೆಯಿಂದ ಕೂಡಿದೆ. ಅಷ್ಟೇ ಸ್ವಾರಸ್ಯಕರವೂ ಆಗಿದೆ. ಹೀಗಾಗಿ ಭಾರತೀಯ ಶಿಲ್ಪಕಲೆಯ ಸಂದರ್ಭದಲ್ಲಿ ಜೈನ ಶಿಲ್ಪಕಲೆಗೆ ಬಹು ವಿಶೇಷವಾದ ಸ್ಥಾನವಿದೆ. ಜೈನ ಧರ್ಮವು ತನ್ನ ಕಲಾ ಪರಂಪರೆಯಲ್ಲಿ ಸಮಕಾಲೀನ ಆಚಾರ-ವಿಚಾರಗಳು, ನಂಬುಗೆ-ಸಂಪ್ರದಾಯಗಳನ್ನು ಒಡಮೂಡಿಸುತ್ತ ಅದನ್ನು ತನ್ನದೇ ಆದ ಪರಿಕಲ್ಪನೆಗಳ ಚೌಕಟ್ಟಿನಲ್ಲಿ ಬೆಳೆಸಿಕೊಂಡು ಬಂದಿರುವುದೇ ಈ ವಿಶೇಷತೆಯಾಗಿದೆ. ನಾಮ, ಸ್ಥಾಪನಾ, ದ್ರವ್ಯ ಮತ್ತು ಭಾವ ಎಂಬ ನಾಲ್ಕು ಭೇದಗಳಿಂದ ಜೈನಾಗಮಗಳ ಪ್ರತಿಷ್ಠಾವಿಧಿಯ ಅನುಸಾರವಾಗಿ ಹಾಗೂ ಯಂತ್ರ-ಮಂತ್ರ ಕ್ರಮದಿಂದ ಬಸದಿಗಳನ್ನು ಮಾಡಿಸಿ ಚಿನ್ನ, ಚಂದನ, ಶಿಲೆಗಳಿಂದ ನಾಲ್ಕು ಅಂಗುಲ ಅಳತೆಯ ಜಿನ ಬಿಂಬಗಳನ್ನು ಪ್ರತಿಷ್ಠಾಪಿಸಿ ಭಕ್ತಿಪೂರ್ವಕವಾಗಿ ಪ್ರತಿದಿನವೂ ಪೂಜಿಸುವವರು ದೇವಲೋಕದ ಸುಖವನ್ನನುಭವಿಸಿ ಮೇರು ಪರ್ವತದಲ್ಲಿ ದೇವತೆಗಳಿಂದ ಪೂಜೆಗೊಳಗಾಗಿ ಮೋಕ್ಷವನ್ನು ಸಂಪಾದಿಸುವರು. ಇಂತಹ ಸಮಕಾಲೀನ ಜೈನ ಧಾರ್ಮಿಕ ಪ್ರೇರಣೆಗಳು, ತತ್ವ-ಸಿದ್ಧಾಂತಗಳು ಮತ್ತು ಮುನಿ-ಭಟ್ಟಾರಕರ ಉಪದೇಶಗಳ ಪ್ರಭಾವಕ್ಕೊಳಗಾದ ಅರಸರು, ಆಡಳಿತಾಧಿಕಾರಿಗಳು ಮತ್ತು ಶ್ರಾವಕರು ತೀರ್ಥಂಕರ, ಯಕ್ಷ-ಯಕ್ಷಿ, ಬಾಹುಬಲಿ ಮೊದಲಾದ ಶಿಲ್ಪಗಳನ್ನು ಬಸದಿಗಳಲ್ಲಿ ಪ್ರತಿಷ್ಠಾಪಿಸಲು ದಾನ ಮಾಡಿ ಮುಕ್ತಿಯನ್ನು ಸಂಪಾದಿಸಿದ್ದಾರೆ. ಜೊತೆಗೆ ಜೈನ ಶಿಲ್ಪ ಕಲೆಯನ್ನು ಅಭಿವೃದ್ಧಿ ಪಡಿಸಿದ್ದಾರೆ. ಹಾಗೆಯೇ ಭಾರತೀಯ ಶಿಲ್ಪಕಲಾ ಪರಂಪರೆಯನ್ನೂ ಶ್ರೀಮಂತಗೊಳಿಸಿದ್ದಾರೆ.[1]

ಸಿಂಧೂ ನಾಗರಿಕತೆಯ ಹರಪ್ಪ ಮತ್ತು ಮೊಹೆಂಜೊದಾರೊ, ಬಿಹಾರದ ಪಾಟ್ನಾ ಸಮೀಪದ ಲೊಹಾಣಿಪುರ, ಓರಿಸ್ಸಾದ ಭುವನೇಶ್ವರ ಸಮೀಪದ ಖಂಡಗಿರಿ-ಉದಯಗಿರಿ ಬೆಟ್ಟಗಳು, ಉತ್ತರ ಪ್ರದೇಶದ ಶಹಬಾದ್ ಪ್ರಾಂತದ ಚೌಸಾ ಮತ್ತು ಮಥುರಾ, ಪಂಜಾಬದ ತಕ್ಷಶಿಲಾ ಮೊದಲಾದೆಡೆಗಳಲ್ಲಿ ದೊರೆತ ಶಿಲ್ಪಗಳು ಜೈನ ಶಿಲ್ಪಕಲೆಯ ಪ್ರಾಚೀನತೆ ಮತ್ತು ಬೆಳವಣಿಗೆಗೆ ಬಹುಮುಖ್ಯ ನಿದರ್ಶನಗಳಾಗಿವೆ. ಈ ಧರ್ಮದ ದಿಗಂಬರ ಮತ್ತು ಶ್ವೇತಾಂಬರ ಪಂಥಗಳಲ್ಲಿ ಕೆಲವು ವೈಚಾರಿಕ ಭೇದಗಳು ಗೋಚರಿಸುತ್ತವೆ. ಶ್ವೇತಾಂಬರ ಸಂಪ್ರದಾಯದಲ್ಲಿ ತೀರ್ಥಂಕರರ ಶಿಲ್ಪಗಳು ವಸ್ತ್ರಾಭರಣಗಳಿಂದ ಅಲಂಕೃತವಾಗಿರುತ್ತವೆ. ಕೆಲವೊಮ್ಮೆ ಶಿಲ್ಪಗಳನ್ನು ಕಂಡರಿಸುವ ಸಂದರ್ಭದಲ್ಲೇ ವಸ್ತ್ರಾಭರಣಗಳನ್ನು ತೋರಿಸಿರುವ ನಿದರ್ಶನಗಳೂ ದೊರೆಯುತ್ತವೆ. ಆದರೆ ದಿಗಂಬರ ಪಂಥದ ತೀರ್ಥಂಕರರ ಶಿಲ್ಪಗಳು ನಗ್ನವಾಗಿದ್ದು ನಿರಲಂಕೃತವಾಗಿರುತ್ತವೆ. ಜೈನ ಧರ್ಮೀಯರು ತೀರ್ಥಂಕರರು ತೋರಿದ ತ್ಯಾಗದ ಹಾದಿಯಲ್ಲಿ ಸಾಗುತ್ತ ತಾವೂ ಅವರಂತೆ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳಲು ಅವರಲ್ಲಿರುವ ಮಹಾಗುಣಗಳು ತಮಗೆ ಸ್ಫೂರ್ತಿ, ಪ್ರೇರಣೆ, ಪ್ರಾಪ್ತಿಯಾಗಲೆಂಬ ಉದ್ದೇಶದಿಂದ ಅವರ ಮಾನವ ರೂಪದ ಸಹಜ ಪ್ರತಿರೂಪಗಳನ್ನು ಬಸದಿಗಳಲ್ಲಿ ಪ್ರತಿಷ್ಠಾಪಿಸಿ ಅವರನ್ನು ದೇವ, ಪರಮಾತ್ಮ, ಅರಹಂತ, ಸಿದ್ಧ ಎಂದು ಆರಾಧಿಸುತ್ತ ಬಂದಿದ್ದಾರೆ. ಇದರಿಂದ ತೀರ್ಥಂಕರರ ಶಿಲ್ಪಗಳ ಆರಾಧನೆಯ ಉದ್ದೇಶ ಅವರಲ್ಲಿರುವ ಗುಣಗಳನ್ನು ಪಡೆಯುವುದೇ

ಹೊರತು ಪ್ರಾಪಂಚಿಕ ಕಷ್ಟಗಳ ಪರಿಹಾರವಾಗಲೆಂದಲ್ಲ ಎಂಬುದು ಸ್ಪಷ್ಟವಾಗುತ್ತದೆ. ವೈರಾಗ್ಯ ಮೂಲವಾಗಿರುವ ತೀರ್ಥಂಕರರ ಪ್ರತಿಮೆಗಳು ಬಾಹ್ಯ ಸೌಂದರ್ಯಕ್ಕಿಂತ ಅಂತರ್ಮುಖಿ ಸೌಂದರ್ಯದೊಂದಿಗೆ ಹೆಚ್ಚು ಸಂಬಂಧವನ್ನು ಹೊಂದಿವೆ. ಹೀಗಾಗಿ ಆತ್ಮದ ಪರಿಶುದ್ಧತೆಯನ್ನು ಹೊರತರುವುದು ಹಾಗೂ ಆತ್ಮೋನ್ನತಿಗಾಗಿ ವ್ಯವಹಾರಿಕವಾದ ಮತ್ತು ಸುಮಧುರವಾದ ಹಿನ್ನೆಲೆಯನ್ನೇರ್ಪಡಿಸುವುದು ಜೈನ ಸ್ಥಾಪತ್ಯ ಕಲೆಯ ಮತ್ತು ಶಿಲ್ಪಕಲೆಯ ಪ್ರಧಾನ ಉದ್ದೇಶಗಳಾಗಿವೆ.[2]

ಪೂಜ್ಯಪಾದಸ್ವಾಮಿಯ ಜೈನಾಭಿಷೇಕ ಮತ್ತು ಅರ್ಹತ್ಪ್ರತಿಷ್ಠಾ, ವಸುನಂದಿಯ ಪ್ರತಿಷ್ಠಾಪಾಠ ಮತ್ತು ಶ್ರಾವಕಾಚಾರ, ಇಂದ್ರನಂದಿಯ ಪ್ರತಿಷ್ಠಾಸಾರ, ಆಶಾಧರಸೂರಿಯ ಜಿನಯಜ್ಞಕಲ್ಪ ಪಂಚಕಲ್ಯಾಣ ಮತ್ತು ಪ್ರತಿಷ್ಠಾಸಾರೋದ್ಧಾರ, ಕುಮುದೇಂದುನ ಪ್ರತಿಷ್ಠಾಕಲ್ಪಟಿಪ್ಪಣಿ, ವಾದಿಕುಮುದಚಂದ್ರನ ಮಾಘನಂದಿಸಂಹಿತಾ ಮತ್ತು ಪ್ರತಿಷ್ಠಾಟಿಪ್ಪಣಿ, ಏಕಸಂಧಿಭಟ್ಟಾರಕನ ಜಿನಸಂಹಿತೆ, ಹಸ್ತಿಮಲ್ಲನ ಪ್ರತಿಷ್ಠಾಸಾರ, ಬ್ರಹ್ಮಸೂರಿಯ ಪ್ರತಿಷ್ಠಾತಿಲಕ, ಜಯಸೇನನ ಪ್ರತಿಷ್ಠಾಪಾಠ, ಭಟ್ಟಾಕಳಂಕನ ಪ್ರತಿಷ್ಠಾಪಾಠ, ವರ್ಧಮಾನಸೂರಿಯ ಆಚಾರದಿನಕರ, ಸೋಮದೇವಸೂರಿಯ ಯಶಸ್ತಿಲಕ, ನೇಮಿಚಂದ್ರ ಸಿದ್ಧಾಂತಚಕ್ರವರ್ತಿಯ ತ್ರಿಲೋಕಸಾರ, ಜಿನೇಂದ್ರನ ಕಲ್ಯಾಣಾಭ್ಯುದಯ ಮೊದಲಾದ ಕೃತಿಗಳಲ್ಲಿ ತೀರ್ಥಂಕರರ ಶಿಲ್ಪಗಳ ರೂಪ, ಲಕ್ಷಣ, ಅಳತೆ, ಆಸನ, ಭಂಗಿ, ಪ್ರತಿಷ್ಠಾಪನೆ, ಪಂಚಕಲ್ಯಾಣ, ಪೂಜೆ, ವಿಧಿ, ವಿಧಾನ, ಮಂತ್ರ, ಯಂತ್ರ, ತಂತ್ರ ಮೊದಲಾದ ವಿಚಾರಗಳ ಕುರಿತಾಗಿ ಬಹುಮುಖ್ಯವಾದ ವಿವರಗಳು ದೊರೆಯುತ್ತವೆ. ಸೋಮದೇವಸೂರಿಯ ಯಶಸ್ತಿಲಕ, ನೇಮಿಚಂದ್ರ ಸಿದ್ಧಾಂತಚಕ್ರವರ್ತಿಯ ತ್ರಿಲೋಕಸಾರ ಮತ್ತು ವಸುನಂದಿಯ ಪ್ರತಿಷ್ಠಾಪಾಠ ಕೃತಿಗಳು ಮಣಿ, ರತ್ನ, ಸ್ವರ್ಣ, ರಜತ (ಬೆಳ್ಳಿ), ಪೀತಲ, ಮುಕ್ತಾಫಲ (ಮುತ್ತು), ಪಾಷಾಣ (ಶಿಲೆ), ಸ್ಫಟಿಕ, ಮೃತ್ (ಮಣ್ಣು), ಕಾಷ್ಠ (ಕಟ್ಟಿಗೆ), ಲೆಪ್ಪ (ಜಿಗುಟಾದ ಅಂಟುಮಣ್ಣು), ಲೋಹ, ದಂತ ಮೊದಲಾದ ಮಾಧ್ಯಮಗಳಲ್ಲಿ ತೀರ್ಥಂಕರರ ಶಿಲ್ಪಗಳನ್ನು ಕಂಡರಿಸುವ ವಿಧಾನಗಳನ್ನು ಸೂಚಿಸಿವೆ. ಜೊತೆಗೆ ಅವುಗಳ ಎತ್ತರ ಒಂಭತ್ತು ಸ್ಥಾನಗಳಲ್ಲಿ ವಿಭಜಿತವಾಗಿ ನೂರೆಂಟು ಅಂಗುಲ ಇರಬೇಕೆಂದು ನಿರ್ದೇಶಿಸಿವೆ. ಅಂದರೆ ತೀರ್ಥಂಕರ ಶಿಲ್ಪದ ಮುಖ ಹನ್ನೆರಡು ಅಂಗುಲ, ಕಂಠ ನಾಲ್ಕು ಅಂಗುಲ, ಕಂಠದಿಂದ ಎದೆಯವರೆಗೆ ಹನ್ನೆರಡು ಅಂಗುಲ, ಎದೆಯಿಂದ ನಾಭಿಯವರೆಗೆ ಹನ್ನೆರಡು ಅಂಗುಲ, ನಾಭಿಯಿಂದ ಲಿಂಗದವರೆಗೆ ಹನ್ನೆರಡು ಅಂಗುಲ, ಲಿಂಗದಿಂದ ಮೊಣಕಾಲದವರೆಗೆ ಇಪ್ಪತ್ನಾಲ್ಕು ಅಂಗುಲ, ಮೊಣಕಾಲು ನಾಲ್ಕು ಅಂಗುಲ, ಮೊಣಕಾಲಿನಿಂದ ಮಣಿಗಂಟದವರೆಗೆ ಇಪ್ಪತ್ನಾಲ್ಕು ಅಂಗುಲ, ಮಣಿಗಂಟಿನಿಂದ ಪಾದತಲದವರೆಗೆ ನಾಲ್ಕು ಅಂಗುಲ ಎತ್ತರವಾಗಿರಬೇಕು. ಪ್ರಾಚೀನ ಶಿಲ್ಪಿಗಳು ಈ ನಿರ್ದೇಶನದಂತೆಯೇ ತೀರ್ಥಂಕರರ ಶಿಲ್ಪಗಳನ್ನು ಕಂಡರಿಸಿದ್ದಾರೆ. ಆದರೆ ಕ್ರಿ. ಶ. ಸುಮಾರು ೧೭ನೆಯ ಶತಮಾನದಿಂದೀಚೆಗೆ ರಾಜಸ್ಥಾನದ ಜಯಪುರ ನಗರದಲ್ಲಿ ಮತ್ತು ಇತರೆಡೆಗಳಲ್ಲಿ ಕಂಡರಿಸಲ್ಪಡುತ್ತಿರುವ ಬಿಳಿ, ಕಪ್ಪು, ಕಂದು ಬಣ್ಣದ ಅಮೃತಶಿಲೆಯ ತೀರ್ಥಂಕರರ ಶಿಲ್ಪಗಳು ಈ ಮೇಲಿನ ಅಳತೆಗಳಿಗೆ ಪ್ರತಿಕೂಲವಾಗಿವೆ. ಈ ಶಿಲ್ಪಿಗಳೂ ಸಹ ತೀರ್ಥಂಕರರ ಶಿಲ್ಪಗಳ ಎತ್ತರವನ್ನು ನೂರೆಂಟು ಅಂಗುಲಗಳಲ್ಲಿ ವಿಭಜಿಸಿರುತ್ತಾರೆ. ಆದರೆ ಅಂಗೋಪಾಂಗಗಳ ಅಳತೆಗಳಲ್ಲಿ ಕೆಲವು ಭಿನ್ನತೆಗಳು ಗೋಚರಿಸುತ್ತವೆ. ಇವು ಕೂದಲಿನಿಂದ ಗಡ್ಡದವರೆಗೆ ಹದಿಮೂರುವರೆ ಅಂಗುಲ, ಗಡ್ಡದಿಂದ ಎದೆಯವರೆಗೆ ಹದಿಮೂರುವರೆ ಅಂಗುಲ, ಎದೆಯಿಂದ ನಾಭಿಯವರೆಗೆ ಹದಿಮೂರುವರೆ ಅಂಗುಲ, ನಾಭಿಯಿಂದ ಲಿಂಗದವರೆಗೆ ಹದಿಮೂರುವರೆ ಅಂಗುಲ, ಲಿಂಗದಿಂದ ಮೊಣಕಾಲದವರೆಗೆ ಇಪ್ಪತ್ತೇಳು ಅಂಗುಲ, ಮೊಣಕಾಲದಿಂದ ಪಾದದವರೆಗೆ ಇಪ್ಪತ್ತೇಳು ಅಂಗುಲ ಅಳತೆಗಳಲ್ಲಿ ಕಂಡರಿಸಲ್ಪಟ್ಟಿರುತ್ತವೆ.[3]

ಜೈನಾಗಮಗಳ ಪ್ರಕಾರ ವಜ್ರಾಸನ, ವೀರಾಸನ, ಕುಕ್ಕುಟಾಸನ ಮೊದಲಾದ ಆಸನಗಳಿಗಿಂತ ಪರ್ಯಂಕಾಸನ ಮತ್ತು ಕಾಯೋತ್ಸರ್ಗ ಎಂಬೆರಡು ಆಸನಗಳು ಧ್ಯಾನಾಸಕ್ತರಾಗಿ ಮೋಕ್ಷವನ್ನು ಸಂಪಾದಿಸಲು ತುಂಬಾ ಉಪಯುಕ್ತವಾಗಿವೆ. ಹೀಗಾಗಿ ವರ್ತಮಾನ ಕಾಲದ ಇಪ್ಪತ್ನಾಲ್ಕು ತೀರ್ಥಂಕರರಲ್ಲಿ ವೃಷಭನಾಥ, ನೇಮಿನಾಥ ಮತ್ತು ಮಹಾವೀರ ತೀರ್ಥಂಕರರು ಪರ್ಯಂಕಾಸನದಲ್ಲಿ ಹಾಗೂ ಉಳಿದ ಇಪ್ಪತ್ತೊಂದು ತೀರ್ಥಂಕರರು ಕಾಯೋತ್ಸರ್ಗದಲ್ಲಿ ತಪಗೈದು ಕೇವಲಜ್ಞಾನವನ್ನು ಪಡೆದು ಮುಕ್ತಿಯನ್ನು ಸಂಪಾದಿಸಿದ್ದಾರೆ. ಆ ಪರಿಕಲ್ಪನೆಯಲ್ಲಿ ಪ್ರಾಚೀನ ಬಸದಿಗಳಲ್ಲಿ ಪ್ರತಿಷ್ಠಾಪಿಸಲಾಗಿರುವ ತೀರ್ಥಂಕರರ ಶಿಲ್ಪಗಳು ಪರ್ಯಂಕಾಸನ ಇಲ್ಲವೇ ಕಾಯೋತ್ಸರ್ಗದಲ್ಲಿರುತ್ತವೆ. ತೀರ್ಥಂಕರರು ತಮ್ಮ ಎಡಗಾಲದ ಮೇಲೆ ಬಲಗಾಲದ ಪಾದವನ್ನು ಮೇಲ್ಮುಖವಾಗಿರಿಸಿಕೊಂಡು ಇದರ ಮೇಲೆ ಎಡಹಸ್ತವನ್ನು ಅರಳಿಸಿಟ್ಟು ಇದರ ಮೇಲೆ ಬಲಹಸ್ತವನ್ನು ಇರಿಸಿ ಧ್ಯಾನಮುದ್ರೆಯಲ್ಲಿ ಆಸೀನರಾಗಿರುವುದು ಪರ್ಯಂಕಾಸನ ಎಂದೆನಿಸುತ್ತದೆ. ಇದನ್ನು ಪಲ್ಯಂಕಾಸನ, ಅರ್ಧಪದ್ಮಾಸನ ಎಂತಲೂ ಕರೆಯಲಾಗುತ್ತದೆ. ಈ ಆಸನ ತೀರ್ಥಂಕರನ ಕೃತಕೃತ್ಯತೆಯ ಮತ್ತು ಯೋಗಮುದ್ರೆಯ ಸಂಕೇತವಾಗಿದೆ. ಅಲ್ಲದೇ ಆತನು ಮನ, ವಚನ, ಕಾಯಗಳನ್ನು ಸಮ್ಯಕ್ ಪ್ರಕಾರದಿಂದ ನಿರೋಧ ಮಾಡಿರುವ ಸೂಚಕವಾಗಿದೆ. ತೀರ್ಥಂಕರರು ತಮ್ಮ ಪಾದಗಳನ್ನು ನಾಲ್ಕು ಅಂಗುಲಗಳಷ್ಟು ಅಂತರದಲ್ಲಿಟ್ಟು ಎರಡೂ ಕೈಗಳನ್ನು ಸರಳವಾಗಿ ಕೆಳಕ್ಕೆ ಮೊಣಕಾಲದವರೆಗೆ ಇಳಿಬಿಟ್ಟು ಬೆರಳುಗಳನ್ನು ನೀಳವಾಗಿರಿಸಿ ಅಂಗೈ ತೊಡೆಯತ್ತ ಇರುವಂತೆ ನಿಶ್ಚಲವಾಗಿ ಆಜಾನುಲಂಬಬಾಹು ಮುದ್ರೆಯಲ್ಲಿ ನಿಂತಿರುವುದು ಕಾಯೋತ್ಸರ್ಗ ಎಂದೆನಿಸುತ್ತದೆ. ಇದನ್ನು ಖಡ್ಗಾಸನ, ವಿಸರ್ಗ, ಸಮಭಂಗಿ, ಸಮಪಾದ ಎಂತಲೂ ಕರೆಯಲಾಗುತ್ತದೆ. ಈ ಆಸನವು ತೀರ್ಥಂಕರನು ಮನ, ವಚನ, ಕಾಯ ಪ್ರವೃತ್ತಿಯನ್ನು ನಿಗ್ರಹಿಸಿರುವ ಮತ್ತು ಆತನು ಈ ಚತುರ್ಗತಿ (ದೇವಗತಿ, ಮನುಷ್ಯಗತಿ, ತ್ರಿಯಂಚಗತಿ, ನರಕಗತಿ) ರೂಪ ಸಂಸಾರದಲ್ಲಿ ಪರಿಭ್ರಮಣ ಮಾಡುವುದು ಬಾಕಿ ಉಳಿದಿಲ್ಲ ಎಂಬುದರ ಸೂಚಕವಾಗಿದೆ. ಕ್ರಿ. ಶ. ಸುಮಾರು ೧೭ನೆಯ ಶತಮಾನದಿಂದೀಚಿನ ಬಸದಿಗಳಲ್ಲಿ ಪ್ರತಿಷ್ಠಾಪಿಸುತ್ತ ಬಂದಿರುವ ತೀರ್ಥಂಕರರ ಶಿಲ್ಪಗಳು ಪರ್ಯಂಕಾಸನದ ಬದಲಾಗಿ ಪದ್ಮಾಸನದಲ್ಲಿರುತ್ತವೆ. ತೀರ್ಥಂಕರರು ತಮ್ಮ ಕಾಲುಗಳೆರಡನ್ನೂ ಒಂದರ ಮೇಲೆ ಒಂದು ಬರುವಂತೆ ಹಾಕಿ ಪಾದಗಳೆರಡನ್ನೂ ಪದ್ಮದಂತೆ ಮೇಲ್ಮುಖವಾಗಿರಿಸಿಕೊಂಡು ಎಡಹಸ್ತದ ಮೇಲೆ ಬಲಹಸ್ತವನ್ನು ಅರಳಿಸಿಟ್ಟು ಧ್ಯಾನಮುದ್ರೆಯಲ್ಲಿ ಆಸೀನರಾಗಿರುವುದು ಪದ್ಮಾಸನ ಎಂದೆನಿಸುತ್ತದೆ.[4]

ಈ ಮೇಲಿನ ಅಳತೆ ಮತ್ತು ಆಸನಗಳಲ್ಲಿರುವ ತೀರ್ಥಂಕರರ ಶಿಲ್ಪಗಳು ಜೈನಾಗಮಗಳ ನಿರ್ದೇಶನದಂತೆ ಕಂಡರಿಸಲ್ಪಟ್ಟಿರುತ್ತವೆ. ಜೊತೆಗೆ ಕೆಲವು ವಿಶೇಷ ಪ್ರತಿಮಾ ಲಕ್ಷಣಗಳಿಂದ ಕೂಡಿರುತ್ತವೆ. ಈ ಲಕ್ಷಣಗಳು ಆಶಾಧರನ ಪ್ರತಿಷ್ಠಾಸಾರೋದ್ಧಾರ, ಜಿನೇಂದ್ರನ ಕಲ್ಯಾಣಾಭ್ಯುದಯ ಮತ್ತು ವರಾಹಮಿಹಿರನ (ಕ್ರಿ. ಶ. ೫೦೫-೫೮೭) ಬೃಹತ್ಸಂಹಿತೆಯಲ್ಲಿ ಕ್ರಮವಾಗಿ ಈ ಮುಂದಿನಂತೆ ನಿರೂಪಿತವಾಗಿವೆ. ಇವು ಶ್ರೀವತ್ಸದಿಂದ ಭೂಷಿತವಾಗಿ ಪರ್ಯಂಕಾಸನ ಇಲ್ಲವೇ ಕಾಯೋತ್ಸರ್ಗದಲ್ಲಿರುತ್ತವೆ. ಶಾಂತವೂ, ಪ್ರಸನ್ನವೂ, ಮಧ್ಯಸ್ಥವೂ, ನಾಸಾಗ್ರಸ್ಥಿತವೂ ಆದ ಅವಿಕಾರ ದೃಷ್ಟಿಯನ್ನು ಹೊಂದಿರುತ್ತವೆ. ಸಂಪೂರ್ಣ ಭಾವರೂಪವನ್ನು ಅಭಿವ್ಯಕ್ತಪಡಿಸುವ ಶುಭ ಲಕ್ಷಣಗಳಿಂದ ಕೂಡಿರುತ್ತವೆ. ರೌದ್ರ ಮೊದಲಾದ ದೋಷಗಳಿಂದ ಮುಕ್ತವಾಗಿರುತ್ತವೆ. ಅತಿಶಯ ಗುಣಗಳಾದ ಚೈತ್ಯವೃಕ್ಷ, ಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಸಿಂಹಾಸನ, ಪ್ರಭಾಮಂಡಲ, ದುಂದುಭಿ, ಮುಕ್ಕೊಡೆ ಎಂಬ ಅಷ್ಟವಿಧ ಮಹಾಪ್ರಾತಿಹಾರ್ಯಗಳಿಂದ ಶೋಭಿತವಾಗಿರುತ್ತವೆ. ಪಾರ್ಶ್ವಗಳಲ್ಲಿ ಯಕ್ಷ-ಯಕ್ಷಿಯರು ಇರುತ್ತಾರೆ. ಹೀಗೆ

ನಿರಲಂಕೃತವಾಗಿರುವ ತೀರ್ಥಂಕರರ ಶಿಲ್ಪಗಳ ಕಂಡರಣೆಯಲ್ಲಿ ಶಿಲ್ಪಿಗಳಿಗೆ ತಮ್ಮ ಕಲಾನೈಪುಣ್ಯ ಪ್ರದರ್ಶನಕ್ಕೆ ತಕ್ಕ ಅವಕಾಶ ಮತ್ತು ಸ್ವಾತಂತ್ರ್ಯ ಇರುವುದಿಲ್ಲ. ಶಿಲ್ಪಿಗಳ ಗಮನವೆಲ್ಲ ತೀರ್ಥಂಕರರ ವೀತರಾಗತೆ, ಗಾಂಭೀರ್ಯ, ಸಂಯಮ, ಪ್ರಶಾಂತತೆ, ಪ್ರಸನ್ನತೆ, ವೈರಾಗ್ಯ, ತ್ಯಾಗ, ಧ್ಯಾನಮುದ್ರೆ, ತಪೋತನ್ಮಯತೆ ಮೊದಲಾದ ಭಾವಗಳೆಡೆಗೆ ಕೇಂದ್ರಿಕೃತವಾಗಿರುತ್ತದೆ. ಇದರಿಂದಾಗಿ ಇಪ್ಪತ್ನಾಲ್ಕು ತೀರ್ಥಂಕರರ ಶಿಲ್ಪಗಳೆಲ್ಲವೂ ಮೇಲ್ನೋಟಕ್ಕೆ ಒಂದೇ ತೆರನಾಗಿ ಗೋಚರಿಸುತ್ತವೆ. ಆದುದರಿಂದ ಒಬ್ಬ ತೀರ್ಥಂಕರನಿಗೂ ಇನ್ನೊಬ್ಬ ತೀರ್ಥಂಕರನಿಗೂ ಪ್ರತ್ಯೇಕತೆಯನ್ನು ಗುರುತಿಸುವುದು ಸಾಧ್ಯವಾಗುವುದಿಲ್ಲ. ಆದರೂ ಕೆಲವೊಂದು ವಿಶೇಷ ಪ್ರತಿಮಾ ಲಕ್ಷಣಗಳಿಂದ ಕೆಲವು ತೀರ್ಥಂಕರರ ಶಿಲ್ಪಗಳನ್ನು ನೋಡಿದೊಡನೆ ಗುರುತಿಸಬಹುದು.[5]

ಜೈನ ಪರಂಪರೆಯ ಸೇನಗಣದ ಜಿನಸೇನಾಚಾರ್ಯನ ಪೂರ್ವಪುರಾಣ, ಪಂಪನ ಆದಿಪುರಾಣ, ಚಾವುಂಡರಾಯನ ಚಾವುಂಡರಾಯಪುರಾಣ, ರವಿಷೇಣಾಚಾರ್ಯನ ಪದ್ಮಪುರಾಣ, ಪುನ್ನಾಟಸಂಘದ ಜಿನಸೇನಾಚಾರ್ಯನ ಹರಿವಂಶಪುರಾಣ, ವೈದಿಕ ಪರಂಪರೆಯ ಋಗ್ವೇದ, ಯಜುರ್ವೇದ, ಕೂರ್ಮಪುರಾಣ, ಮಾರ್ಕಂಡೇಯಪುರಾಣ, ಭಾಗವತಪುರಾಣ, ಶೈವ ಪರಂಪರೆಯ ಶಿವಮಹಾಪುರಾಣ ಮತ್ತು ಬೌದ್ಧ ಪರಂಪರೆಯ ಮಜ್ಜಿನಕಾಯ, ಧರ್ಮಕೀರ್ತಿಯ ನ್ಯಾಯಬಿಂದು ಮೊದಲಾದ ಕೃತಿಗಳಲ್ಲಿ ೧ನೆಯ ತೀರ್ಥಂಕರ ಆದಿನಾಥನು ತಪಸ್ಸನ್ನು ಕೈಗೊಂಡಿದ್ದ ಸಂದರ್ಭದಲ್ಲಿ ಆತನ ಕೂದಲುಗಳು ಜಟೆಗಟ್ಟಿದ್ದವು ಮತ್ತು ಆತನು ಜಟಾಧಾರಿಯಾಗಿ ವಿಹರಿಸುತ್ತಿದ್ದನು ಎಂಬ ಸಂಗತಿಗಳು ಪ್ರಸ್ತಾಪವಾಗಿವೆ. ಆ ಪರಿಕಲ್ಪನೆಯಲ್ಲಿ ಆದಿನಾಥನ ಪ್ರಾಚೀನ ಶಿಲ್ಪಗಳಲ್ಲಿ ಭುಜಗಳ ಪಾರ್ಶ್ವಗಳಲ್ಲಿ ಇಳಿಬಿದ್ದ ಜಟೆಗಳನ್ನು ತೋರಿಸುವುದು ಸಾಮಾನ್ಯವಾದ ಲಕ್ಷಣವಾಗಿದೆ. ಇದರಿಂದಲೇ ಈತನಿಗೆ ಕೇಸರಿನಾಥ (ಸಿಂಹದಂತೆ ಕೂದಲುಳ್ಳವನು) ಎಂಬ ಮತ್ತೊಂದು ಹೆಸರು ರೂಢಿಯಲ್ಲಿದೆ. ಅಲ್ಲದೇ ಈತನನ್ನು ವೃಷಭನಾಥ, ಆದಿಬ್ರಹ್ಮ, ಆದಿಪರಮೇಶ್ವರ, ಆದಿಭಟ್ಟಾರಕ, ಪ್ರಜಾಪತಿ ಎಂತಲೂ ಕರೆಯಲಾಗುತ್ತದೆ. ಜಿನಸೇನಾಚಾರ್ಯನ ಶಿಷ್ಯ ಗುಣಭದ್ರಾಚಾರ್ಯನ ಉತ್ತರಪುರಾಣ ಮತ್ತು ತರುವಾಯದ ಕೆಲವು ಪ್ರಾಕೃತ, ಸಂಸ್ಕೃತ, ಕನ್ನಡ ಕೃತಿಗಳಲ್ಲಿ ೭ನೆಯ ತೀರ್ಥಂಕರ ಸುಪಾರ್ಶ್ವನಾಥನ ಪೂರ್ವ ಭವಾವಳಿಗಳು ನಿರೂಪಿತವಾಗಿವೆ. ಅವುಗಳಲ್ಲಿ ಈತನ ಜೀವನದೊಡನೆ ಸರ್ಪಗಳ ಸಂಬಂಧದ ಕುರಿತಾಗಿ ಪ್ರಸ್ತಾಪಗಳಿಲ್ಲ. ಆದರೆ ಈತನ ಕೆಲವು ಶಿಲ್ಪಗಳನ್ನು ಗಮನಿಸಿದಾಗ ಶಿರದ ಮೇಲೆ ಐದು ಹೆಡೆಗಳ ಸರ್ಪವನ್ನು ತೋರಿಸಲಾಗಿರುತ್ತದೆ. ಆ ಕೃತಿಗಳಲ್ಲಿ ಈತನ ವಂಶ ೧ನೆಯ ತೀರ್ಥಂಕರ ಆದಿನಾಥನ ವಂಶವಾದ ಇಕ್ಷ್ವಾಕುವಂಶ ಎಂದು ಉಲ್ಲೇಖಿತವಾಗಿದೆ. ಆದರೆ ಮಾಘಣಂದಿಯ ಶಾಸ್ತ್ರಸಾರ ಸಮುಚ್ಚಯ ಕೃತಿಯಲ್ಲಿ ಇಕ್ಷ್ವಾಕುವಂಶಕ್ಕೆ ಸಂಬಂಧಿಸಿದ ತೀರ್ಥಂಕರರ ಪಟ್ಟಿಯಲ್ಲಿ ಸುಪಾರ್ಶ್ವನಾಥನ ಹೆಸರು ಗೋಚರಿಸುವುದಿಲ್ಲ. ವಾಸ್ತವವಾಗಿ ಈತನ ಹೆಸರು ಉಗ್ರವಂಶದ ತೀರ್ಥಂಕರರ ಪಟ್ಟಿಯಲ್ಲಿ ಗೋಚರಿಸುತ್ತದೆ. ೨೩ನೆಯ ತೀರ್ಥಂಕರ ಪಾರ್ಶ್ವನಾಥನೂ ಉಗ್ರವಂಶಕ್ಕೆ ಸಂಬಂಧಿಸಿದ್ದಾನೆ. ಇವರಿಬ್ಬರೂ ಕಾಶಿ ರಾಜ್ಯದ ವಾರಣಾಸಿ ನಗರದವರು. ಸುಪಾರ್ಶ್ವನಾಥನ ಲಾಂಛನ ಸ್ವಸ್ತಿಕವು ಸರ್ಪದ ಸಂಕೇತವಾಗಿದೆ. ಸರ್ಪದ ಹೆಡೆಯ ಮೇಲೆ ಸ್ವಸ್ತಿಕದ ಚಿಹ್ನೆ ಇರುತ್ತದೆ. ಒಟ್ಟಾರೆ ಈತನ ಶಿಲ್ಪಗಳಲ್ಲಿ ಶಿರದ ಮೇಲೆ ತೋರಿಸಲಾಗಿರುವ ಐದು ಹೆಡೆಗಳ ಸರ್ಪಕ್ಕೆ ಯಾವುದೇ ಸ್ಪಷ್ಟವಾದ ತಾರ್ಕಿಕ ಕಾರಣಗಳಿಲ್ಲದಿದ್ದರೂ ಅದಕ್ಕೆ ನಾಗ ಪೂಜೆಯ ವ್ಯಾಜ ಮತ್ತು ಆತನ ಲಾಂಛನ ಸ್ವಸ್ತಿಕದ ಹಿನ್ನೆಲೆಯೇ ಮೂಲವಾಗಿದೆ.[6]

ಗುಣಭದ್ರಾಚಾರ್ಯನ ಉತ್ತರಪುರಾಣ ಮತ್ತು ಪ್ರಾಕೃತ, ಸಂಸ್ಕೃತ, ಕನ್ನಡ, ಮರಾಠಿ ಭಾಷೆಗಳಲ್ಲಿ ರಚಿತವಾಗಿರುವ ಪುರಾಣ, ಸಾಂಗತ್ಯ, ಕಥನ, ಷಟ್ಪದಿ, ವಚನ, ಸ್ತೋತ್ರ, ಜಾನಪದ ಕೃತಿಗಳಲ್ಲಿ ೨೩ನೆಯ ತೀರ್ಥಂಕರ ಪಾರ್ಶ್ವನಾಥನ ಪೂರ್ವ ಭವಾವಳಿಗಳು ನಿರೂಪಿತವಾಗಿವೆ. ಆತನು ಕೊನೆಯ ಭವದಲ್ಲಿ ಕೈಗೊಂಡ ತಪಶ್ಚರ್ಯದ ಸಂದರ್ಭದಲ್ಲಿ ಆತನ ಜನ್ಮಜನ್ಮಾಂತರಗಳ ವೈರಿಯಾದ ಕಮಠನು ಆತನಿಗೆ ನೀಡಿದ ವಿವಿಧ ಉಪಸರ್ಗಗಳು ಮತ್ತು ಅವುಗಳಿಂದ ಆತನನ್ನು ರಕ್ಷಿಸಿದ ಧರಣೇಂದ್ರ ಮತ್ತು ಪದ್ಮಾವತಿ ನಾಗ ದಂಪತಿಗಳನ್ನು ಆತನ ಶಿಲ್ಪ ಸಂಕೀರ್ಣದಲ್ಲಿ ತೋರಿಸಲಾಗಿರುತ್ತದೆ. ಆ ಹಿನ್ನೆಲೆಯನ್ನು ಬಾದಾಮಿ, ಐಹೊಳೆ, ಎಲ್ಲೋರ, ಹೊಂಬುಜ, ಶ್ರವಣಬೆಳಗೊಳದಲ್ಲಿರುವ ಆತನ ಶಿಲ್ಪಗಳಲ್ಲಿ ಗಮನಿಸಬಹುದು. ಆತನ ಶಿರದ ಮೇಲೆ ಸಾಮಾನ್ಯವಾಗಿ ಏಳು ಅಥವಾ ಹೆಚ್ಚಿನ ಸಂಖ್ಯೆಯ ಹೆಡೆಗಳ ಸರ್ಪವನ್ನು ತೋರಿಸಲಾಗಿರುತ್ತದೆ. ಅಪರೂಪಕ್ಕೆ ಕ್ರಿ. ಶ. ಸುಮಾರು ೧೧ನೆಯ ಶತಮಾನದ ಪೂರ್ವದ ಶಿಲ್ಪಗಳಲ್ಲಿ ಐದು ಹೆಡೆಗಳ ಸರ್ಪವನ್ನೂ ತೋರಿಸಲಾಗಿದೆ. ಇದನ್ನು ಬಾದಾಮಿ, ಐಹೊಳೆ, ನರಗುಂದ ತಾಲ್ಲೂಕಿನ ಕೊಣ್ಣೂರ, ಗದಗ ತಾಲ್ಲೂಕಿನ ಮಲ್ಲಸಮುದ್ರ, ಟಿ. ನರಸೀಪುರ ತಾಲ್ಲೂಕಿನ ತಲಕಾಡು, ನಾಗಮಂಗಲ ತಾಲ್ಲೂಕಿನ ಕಂಬದಹಳ್ಳಿ ಹತ್ತಿರದ ಹೊನ್ನಾವರದಲ್ಲಿರುವ ಪಾರ್ಶ್ವನಾಥನ ಶಿಲ್ಪಗಳಲ್ಲಿ ಗಮನಿಸಬಹುದು. ಪ್ರಾಚೀನ ತೀರ್ಥಂಕರರ ಶಿಲ್ಪಗಳಲ್ಲಿ ಅವರ ಕಾಲುಗಳ ಪಾರ್ಶ್ವಗಳಲ್ಲಿ ತೋರಿಸಿರುವ ಯಕ್ಷ-ಯಕ್ಷಿಯರ ಭುಜಗಳು, ಆಯುಧಗಳು, ವಾಹನಗಳು ಮೊದಲಾದ ಪ್ರತಿಮಾ ಲಕ್ಷಣಗಳ ತಲಸ್ಪರ್ಶಿ ಅಧ್ಯಯನದಿಂದಲೂ ತೀರ್ಥಂಕರರನ್ನು ಸುಲಭವಾಗಿ ಗುರುತಿಸಬಹುದಾಗಿದೆ. ಕೆಲವೊಮ್ಮೆ ತೀರ್ಥಂಕರರ ಹೆಸರುಗಳನ್ನು ಅವರ ಪಾದಪೀಠದ ಶಾಸನಗಳಲ್ಲಿ ಸೂಚಿಸಲಾಗಿರುತ್ತದೆ. ಇನ್ನೂ ಕೆಲವೊಮ್ಮೆ ಬಸದಿಗಳ ನಿರ್ಮಾತೃರು ತಾವು ಯಾವ ತೀರ್ಥಂಕರನಿಗೆ ಬಸದಿಯನ್ನು ನಿರ್ಮಾಣ ಮಾಡಿಸಿದರೆಂಬುದನ್ನು ಶಾಸನಗಳ ಮೂಲಕ ತಿಳಿಸಿರುತ್ತಾರೆ. ಅಲ್ಲದೇ ಅದೇ ತೀರ್ಥಂಕರನ ಶಿಲ್ಪವನ್ನು ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಿರುತ್ತಾರೆ. ಆಯಾ ಪರಿಸರದ ಆಚಾರ್ಯರು ಮತ್ತು ಕವಿಗಳು ತಮ್ಮ ಕೃತಿಗಳಲ್ಲಿ ತಮ್ಮ ವಿಚಾರಗಳನ್ನು ಹೇಳಿಕೊಳ್ಳುತ್ತ ಸ್ಥಳೀಯ ಮತ್ತು ಸುತ್ತಮುತ್ತಲಿನ ಕೆಲವು ಗ್ರಾಮಗಳ ಬಸದಿಗಳನ್ನು ಹೆಸರಿಸಿರುತ್ತಾರೆ. ಈ ಎಲ್ಲ ಸಂಗತಿಗಳ ತಲಸ್ಪರ್ಶಿ ಅಧ್ಯಯನಗಳಿಂದಲೂ ತೀರ್ಥಂಕರರ ಶಿಲ್ಪಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.[7]

ಜಗತ್ತಿನಲ್ಲಿ ಶರೀರಧಾರಿಯಾದ ಪ್ರತಿಯೊಂದು ಜೀವಿಯ ಶರೀರದಲ್ಲಿ ಒಂದಲ್ಲ ಒಂದು ಬಗೆಯ ಶುಭ ಇಲ್ಲವೇ ಅಶುಭವಾದ ಚಿಹ್ನೆಗಳಿರುತ್ತವೆ. ತೀರ್ಥಂಕರರಂತಹ ಮಹಾಪುರುಷರ ಶರೀರದಲ್ಲಿ ಜನನದಿಂದಲೇ ೧೦೦೮ ಶುಭ ಚಿಹ್ನೆಗಳಿರುತ್ತವೆ. ಅವುಗಳಲ್ಲಿ ಯಾವ ಚಿಹ್ನೆ ಅವರ ಬಲಗಾಲಿನ ಹೆಬ್ಬೆರಳಿನ ತಳಭಾಗದಲ್ಲಿರುತ್ತದೋ ಆ ಚಿಹ್ನೆಯನ್ನು ಅವರ ಜನ್ಮಾಭಿಷೇಕ ಕಲ್ಯಾಣದ ಸಂದರ್ಭದಲ್ಲಿ ಸುಮೇರು ಪರ್ವತದಲ್ಲಿ ಸೌಧರ್ಮೇಂದ್ರನು ಗುರುತಿಸಿ ಘೋಷಿಸುತ್ತಾನೆ. ಹೀಗೆ ಘೋಷಿಸಿದ ಚಿಹ್ನೆಯೇ ಆ ತೀರ್ಥಂಕರನ ಲಾಂಛನವಾಗುವುದು. ಆ ಲಾಂಛನಗಳಿಂದಲೇ ಆಯಾ ತೀರ್ಥಂಕರರ ಹೆಸರು, ಸ್ವರೂಪ, ಚರಿತ್ರೆ ಸ್ಮರಣವಾಗುತ್ತದೆ. ಉತ್ತರ ಭಾರತದಲ್ಲಿ ಕ್ರಿಸ್ತಶಕಾರಂಭದಿಂದಲೂ ಆಯಾ ತೀರ್ಥಂಕರರಿಗೆ ಸಂಬಂಧಿಸಿದ ಲಾಂಛನಗಳನ್ನು ಪಾದಪೀಠದಲ್ಲಿ ತೋರಿಸುವ ಪರಂಪರೆ ರೂಢಿಯಲ್ಲಿದೆ. ಈ ಪರಂಪರೆ ಪ್ರಾಯಶಃ ಉತ್ತರ ಭಾರತದ ಶಿಲ್ಪಿಗಳ ಪ್ರಭಾವದಿಂದಾಗಿ ದಕ್ಷಿಣ ಭಾರತದಲ್ಲಿ ಕ್ರಿ. ಶ. ಸುಮಾರು ೧೩ನೆಯ ಶತಮಾನದಿಂದೀಚೆಗೆ ಪ್ರಾರಂಭವಾಗಿದೆ. ಲಾಂಛನಗಳಿರುವ ತೀರ್ಥಂಕರರ ಶಿಲ್ಪಗಳನ್ನು ಸುಲಭವಾಗಿ ಗುರುತಿಸಬಹುದು. ದೇವಗಿರಿಯ ಸೇವುಣ ಮನೆತನದ ಆಳ್ವಿಕೆಯ ಪ್ರದೇಶದಲ್ಲಿ

ಪ್ರತಿಷ್ಠಾಪಿಸಲ್ಪಡುತ್ತಿದ್ದ ತೀರ್ಥಂಕರರ ಶಿಲ್ಪಗಳ ಪಾದಪೀಠಗಳಲ್ಲಿ ಲಾಂಛನಗಳನ್ನು ತೋರಿಸುವ ಪರಂಪರೆ ಪ್ರಚಲಿತದಲ್ಲಿತ್ತು. ಆ ಕಾಲದ ಕೆಲವು ತೀರ್ಥಂಕರರ ಶಿಲ್ಪಗಳು ವಿಜಾಪುರದಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವಸ್ತುಸಂಗ್ರಹಾಲಯದಲ್ಲಿವೆ. ಇವುಗಳ ಪಾದಪೀಠದಲ್ಲಿ ಲಾಂಛನಗಳನ್ನು ತೋರಿಸಲಾಗಿದೆ. ಅಲ್ಲದೇ ಕ್ರಿ. ಶ. ಸುಮಾರು ೧೨ನೆಯ ಶತಮಾನದಲ್ಲಿ ಒಂದೇ ಸ್ಥಳದಲ್ಲಿ ಪ್ರತಿಷ್ಠಾಪಿಸಲಾಗಿರುವ ಇಪ್ಪತ್ನಾಲ್ಕು ತೀರ್ಥಂಕರರ ಶಿಲ್ಪಗಳನ್ನು ಗುರುತಿಸಲು ಅವರವರ ಪಾದಪೀಠಗಳಲ್ಲಿ ಲಾಂಛನಗಳನ್ನು ತೋರಿಸಿರುವ ಕೆಲವು ನಿದರ್ಶನಗಳು ಶ್ರವಣಬೆಳಗೊಳ, ನರೇಗಲ್ಲ, ಹಾಡುವಳ್ಳಿ ಮೊದಲಾದೆಡೆಗಳಲ್ಲಿ ದೊರೆಯುತ್ತವೆ.[8]

ಇಪ್ಪತ್ನಾಲ್ಕು ತೀರ್ಥಂಕರರ ಶಿಲ್ಪಗಳಲ್ಲಿ ಕೆಲವು ಸ್ವತಂತ್ರ ರೂಪದಲ್ಲೂ, ಇನ್ನೂ ಕೆಲವು ಸಂಕೀರ್ಣ ರೂಪದಲ್ಲೂ ಬಸದಿಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುತ್ತವೆ. ಸ್ವತಂತ್ರ ರೂಪದ ಶಿಲ್ಪಗಳಲ್ಲಿ ಮಧ್ಯದಲ್ಲಿ ಯಾವುದೋ ಒಬ್ಬ ತೀರ್ಥಂಕರ ಸುತ್ತಲಿನ ಪ್ರಭಾವಳಿಯಲ್ಲಿ ಅಷ್ಟವಿಧ ಮಹಾಪ್ರಾತಿಹಾರ್ಯಗಳು ಮತ್ತು ಇಕ್ಕೆಲಗಳಲ್ಲಿ ಯಕ್ಷ-ಯಕ್ಷಿಯರನ್ನು ತೋರಿಸಲಾಗಿರುತ್ತದೆ. ಇಂತಹ ಶಿಲ್ಪಗಳು ಆ ತೀರ್ಥಂಕರನು ಕೇವಲಜ್ಞಾನದ ತರುವಾಯ ಸಮವಸರಣ ಮಂಟಪದಲ್ಲಿ ಸಕಲ ಜೀವಿಗಳನ್ನುದ್ದೇಶಿಸಿ ಧರ್ಮೋಪದೇಶವನ್ನು ಕೈಗೊಂಡಿರುವುದನ್ನು ಪ್ರತಿನಿಧಿಸುತ್ತವೆ. ಸಂಕೀರ್ಣ ರೂಪದ ಶಿಲ್ಪಗಳಲ್ಲಿ ಯಾವುದೋ ಒಬ್ಬ ತೀರ್ಥಂಕರನ ಶಿಲ್ಪ ಮಧ್ಯದಲ್ಲಿರುತ್ತದೆ. ಸುತ್ತಲಿನ ಪ್ರಭಾವಳಿಯಲ್ಲಿ ಉಳಿದ ಇಪ್ಪತ್ಮೂರು ತೀರ್ಥಂಕರರನ್ನು ತೋರಿಸಲಾಗಿರುತ್ತದೆ. ಆಗ ಮಧ್ಯದಲ್ಲಿರುವ ತೀರ್ಥಂಕರನ ಹೆಸರಿನಿಂದಲೇ ಆ ಶಿಲ್ಪವನ್ನು ಗುರುತಿಸಲಾಗುತ್ತದೆ. ಉದಾಹರಣೆಗೆ, ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ, ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಪಾರ್ಶ್ವನಾಥ ಇತ್ಯಾದಿ. ಇನ್ನೊಂದು ಬಗೆಯ ಶಿಲ್ಪಗಳಲ್ಲಿ ಭೂತ, ವರ್ತಮಾನ, ಭವಿಷ್ಯತ್ಕಾಲಗಳ ಒಟ್ಟೂ ಎಪ್ಪತ್ತೆರಡು ತೀರ್ಥಂಕರರನ್ನು ತೋರಿಸಲಾಗಿರುತ್ತದೆ. ಇಂತಹ ಶಿಲ್ಪಗಳನ್ನು ತ್ರಿಕಾಲ ತೀರ್ಥಂಕರರ ಫಲಕ ಎಂದು ಕರೆಯಲಾಗುತ್ತದೆ.[9]

ತೀರ್ಥಂಕರರ ಶಿಲ್ಪಗಳಲ್ಲಿ ಮತ್ತು ಅವುಗಳಿಗೆ ಪೂರಕವಾಗಿ ಕೆಲವು ಸಂಕೇತಗಳನ್ನು (ಚಿಹ್ನೆಗಳು) ಬಳಸುವ ಪರಂಪರೆ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ತೀರ್ಥಂಕರರ ದಿಗಂಬರತ್ವವು ಮೋಕ್ಷಪದ ಪ್ರಾಪ್ತಿಯ ಸೂಚಕವಾಗಿದೆ. ತೀರ್ಥಂಕರರ ವೃಕ್ಷದಲ್ಲಿರುವ ನಾಲ್ಕು ಎಸಳುಗಳುಳ್ಳ ಹೂವಿನಾಕಾರದ ಚಿಹ್ನೆಯನ್ನು 'ಶ್ರೀವತ್ಸ' ಎಂದು ಗುರುತಿಸಲಾಗುತ್ತದೆ. ಅದು ಪುನರ್ಜನ್ಮ ಚಕ್ರದಿಂದ ಪಾರಾಗಿ ಮುಕ್ತಿಯನ್ನು ಪಡೆದ ಸಿದ್ಧರಿಗೆ ಮಾತ್ರ ಇರುತ್ತದೆ. ಕೇವಲಜ್ಞಾನ ಪಡೆದು ಜ್ಞಾನವನ್ನು ಪ್ರಸಾರ ಮಾಡುವ ಅರಹಂತರಿಗೆ ಇರುವುದಿಲ್ಲ. ಇದು ತೀರ್ಥಂಕರರ ೧೦೦೮ ಶುಭ ಚಿಹ್ನೆಗಳಲ್ಲಿ ಒಂದಾಗಿದೆ. 'ಶ್ರೀ' ಎಂದರೆ ಸಂಪತ್ತು (ಲಕ್ಷ್ಮಿ) ಎಂದೂ, 'ವತ್ಸ' ಎಂದರೆ ಪುತ್ರ ಎಂದೂ ಅರ್ಥ. ತೀರ್ಥಂಕರರು ಅಂತರಂಗ ಮತ್ತು ಬಹಿರಂಗ ಸಂಪತ್ತುಳ್ಳವರೂ, ಬಹಿರಂಗವಾಗಿ ಸಮವಸರಣ ವೈಭವ ಸಂಪತ್ತಿನಿಂದ ಶೋಭಿಸುತ್ತಿರುವವರೂ, ಅನಂತದರ್ಶನ, ಅನಂತಜ್ಞಾನ, ಅನಂತಸುಖ, ಅನಂತವೀರ್ಯ ಎಂಬ ನಾಲ್ಕು ಅಂತರಂಗದ ಅನಂತಚತುಷ್ಟಯ ಸಂಪತ್ತುಳ್ಳವರೆಂದೂ ಶ್ರೀವತ್ಸ ಚಿಹ್ನೆಯ ಹಿನ್ನೆಲೆಯಾಗಿದೆ. ತೀರ್ಥಂಕರರ ಮಂದಸ್ಮಿತ ಮುಖಭಾವವು ಅವರು ಕಷಾಯರಹಿತ, ನಿರ್ವಿಕಾರ, ನಿರ್ಲಿಪ್ತ ಮತ್ತು ಭಾವಯುಕ್ತವಾಗಿರುವುದನ್ನು ಸೂಚಿಸುತ್ತದೆ. ಅದು ರಾಗ, ದ್ವೇಷ, ಕಷಾಯಾದಿ ವಿಕಾರಗಳನ್ನು ನಷ್ಟಮಾಡಿಕೊಂಡು ಬಹಿರಾತ್ಮಭಾವ ಬಿಟ್ಟು, ಅಂತರಾತ್ಮ ಸ್ವರೂಪ ತೊಟ್ಟು ಪರಮಾತ್ಮ ಪದವಿಯನ್ನು ಪ್ರಾಪ್ತಮಾಡಿಕೊಂಡಿರುವುದನ್ನು ಸೂಚಿಸುತ್ತದೆ. ತೀರ್ಥಂಕರರು ಯಾವ ಮರದ ಕೆಳಗೆ ದೀಕ್ಷೆ ಅಥವಾ ಕೇವಲಜ್ಞಾನ ಪಡೆದರೋ ಆ ಮರವು

ಚೈತ್ಯವೃಕ್ಷ ಎಂದೆನಿಸುತ್ತದೆ. ಅದನ್ನು ಸಾಮಾನ್ಯವಾಗಿ ತೀರ್ಥಂಕರರ ಶಿಲ್ಪಗಳಲ್ಲಿ ಸುತ್ತಲಿನ ಪ್ರಭಾವಳಿಯಲ್ಲಿ ತೋರಿಸಲಾಗಿರುತ್ತದೆ. ಅದು ಸಕಲ ಜೀವಿಗಳಿಗೆ ಶೋಕರಹಿತವಾದ, ನಿರಾಕುಲಾನಂದಾಯಕ, ನಿತ್ಯನಿಜಸುಖದ ತಾಣವಾದ ಮೋಕ್ಷ ಪದವಿಯನ್ನು ಪಡೆಯುವಂತೆ ಸೂಚಿಸುತ್ತದೆ. ತೀರ್ಥಂಕರರ ಶಿರದ ಮೇಲಿರುವ ಮುಕ್ಕೊಡೆಯು ಅವರು ಹೊಂದಿರುವ ಅಷ್ಟವಿಧ ಮಹಾಪ್ರಾತಿಹಾರ್ಯಗಳಲ್ಲಿ ಒಂದಾಗಿದೆ. ಇದು ಮೂರು ಲೋಕಗಳ ಮೇಲಿನ ಪ್ರಭುತ್ವವನ್ನೂ, ತ್ರಿಲೋಕದೊಡೆಯ ದೇವಾಧಿದೇವನೆಂಬ ಸಂಜ್ಞೆಯನ್ನೂ, ಮೂರು ಕಾಲಗಳ ಜ್ಞಾನಲಾಭವನ್ನೂ, ಮೂರು ಲೋಕಗಳ ಜೀವಿಗಳಿಗೆ ಆಶ್ರಯದ ಸೂಚಕವನ್ನೂ, ತ್ರಿಕಾಲದಲ್ಲೂ ತ್ರಿಲೋಕದ ಚರಾಚರಗಳೆಲ್ಲವೂ ಏಕಕಾಲದಲ್ಲಿ ತಿಳಿಯಲ್ಪಡುವ ಕೇವಲಜ್ಞಾನದ ಸಂಕೇತವೂ, ಸಮ್ಯಗ್ ದರ್ಶನ, ಜ್ಞಾನ, ಚಾರಿತ್ರ್ಯಗಳೆಂಬ ರತ್ನತ್ರಯ ಸ್ವರೂಪದಿಂದ ದೈವತ್ವ ಪಡೆದಿರುವುದರ ಸೂಚಕವೂ, ತ್ರಿಕಾಲಾಬಾದಿತವಾಗಿರುವುದರ ಪ್ರತೀಕವೂ ಆಗಿದೆ.[10]

ತೀರ್ಥಂಕರರ ಶಿರದ ಹಿಂಭಾಗದಲ್ಲಿರುವ ಪ್ರಭಾಮಂಡಲವು ಅಷ್ಟವಿಧ ಮಹಾಪ್ರಾತಿಹಾರ್ಯಗಳಲ್ಲಿ ಒಂದಾಗಿದೆ. ಇದು ಕೇವಲಜ್ಞಾನದ ಮತ್ತು ಲೋಕಾಲೋಕದಲ್ಲಿ ಅರಿತುಕೊಳ್ಳುವುದನ್ನೆಲ್ಲ ಸಂಪೂರ್ಣವಾಗಿ ಅರಿತುಕೊಂಡಿರುವುದನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ತೀರ್ಥಂಕರರ ಹೆಸರನ್ನು ಬರೆಯುವಾಗ ೧೦೦೮ ಸಂಖ್ಯೆಯನ್ನು ಬಳಸಲಾಗುತ್ತದೆ. ಇದು ತೀರ್ಥಂಕರರ ಶರೀರದಲ್ಲಿ ೧೦೦೮ ಶುಭ ಲಕ್ಷಣಗಳಿರುವುದನ್ನೂ, ಅವರಿಗೆ ೧೦೦೮ ಹೆಸರುಗಳಿರುವುದನ್ನೂ, ಅವರು ೧೦೦೮ ಕಲಶಗಳಿಂದ ಅಭಿಷೇಕ ಮಾಡಲ್ಪಟ್ಟಿರುವುದನ್ನೂ, ದೇವೇಂದ್ರನು ೧೦೦೮ ಕಣ್ಣುಗಳಿಂದ ಅವರ ವೈಭವವನ್ನು ನೋಡಲ್ಪಟ್ಟಿರುವುದನ್ನೂ ಸೂಚಿಸುತ್ತದೆ. ಹೀಗೆ ತೀರ್ಥಂಕರರ ಶಿಲ್ಪಗಳು ಶಾಸ್ತ್ರಗಳ ನಿರ್ದೇಶನದಂತೆ ಅಳತೆಗಳಿಗನುಗುಣವಾಗಿ ಕಂಡರಿಸಲ್ಪಟ್ಟಿರುವುದರಿಂದ ಅವು ಪ್ರಭಾವಿ ಶಿಲ್ಪಗಳಾಗಿದ್ದು, ಸಮಾಜ ಮತ್ತು ಜನಸಾಮಾನ್ಯರ ಸ್ಥಿಮಿತತೆಯನ್ನು ತರುವಲ್ಲಿ ಪ್ರಭಾವಿಯಾಗಿವೆ.[11] ಜೈನ ಪರಂಪರೆಯ ದಿಗಂಬರ ಪಂಥದ ಸಂಹಿತೆಗಳ ಪ್ರಕಾರ ವರ್ತಮಾನ ಕಾಲದ ಇಪ್ಪತ್ನಾಲ್ಕು ತೀರ್ಥಂಕರರ ವಿವರಗಳು ಈ ಕೆಳಗಿನಂತಿವೆ.[12]

| ಅ. ಸಂ. | ತೀರ್ಥಂಕರರು | ಲಾಂಛನ | ತಂದೆ | ತಾಯಿ | ಜನ್ಮಸ್ಥಳ | ನಿರ್ವಾಣ ಸ್ಥಳ |
|---|---|---|---|---|---|---|
| ೧. | ವೃಷಭನಾಥ | ವೃಷಭ | ನಾಭಿರಾಜ | ಮರುದೇವಿ | ಅಯೋಧ್ಯೆ | ಕೈಲಾಸ |
| ೨. | ಅಜಿತನಾಥ | ಆನೆ | ಜಿತಶತ್ರು | ವಿಜಯಸೇನೆ | ಅಯೋಧ್ಯೆ | ಸಮೇದಗಿರಿ |
| ೩, | ಸಂಭವನಾಥ | ಕುದುರೆ | ದೃಢರಾಜ | ಸುಷೇಣಾದೇವಿ | ಶ್ರಾವಸ್ತಿ | ಸಮೇದಗಿರಿ |
| ೪, | ಅಭಿನಂದನನಾಥ | ಕಪಿ | ಸ್ವಯಂವರ | ಸಿದ್ಧಾರ್ಥದೇವಿ | ಅಯೋಧ್ಯೆ | ಸಮೇದಗಿರಿ |
| ೫, | ಸುಮತಿನಾಥ | ಚಕ್ರವಾಕಪಕ್ಷಿ | ಮೇಘರಥ | ಸುಮಂಗಲಾದೇವಿ | ಅಯೋಧ್ಯೆ | ಸಮೇದಗಿರಿ |
| ೬. | ಪದ್ಮಪ್ರಭನಾಥ | ಕಮಲ | ಧರಣರಾಜ | ಸುಷೀಮಾದೇವಿ | ಕೌಶಾಂಬಿ | ಸಮೇದಗಿರಿ |
| ೭. | ಸುಪಾರ್ಶ್ವನಾಥ | ಸ್ವಸ್ತಿಕ | ಸುಪ್ರತಿಷ್ಠರಾಜ | ಪೃಥ್ವೀಷೇಣಾದೇವಿ | ವಾರಣಾಸಿ | ಸಮೇದಗಿರಿ |
| ೮. | ಚಂದ್ರಪ್ರಭನಾಥ | ಚಂದ್ರ | ಮಹಾಸೇನರಾಜ | ಲಕ್ಷ್ಮಣಾದೇವಿ | ಚಂದ್ರಪುರ | ಸಮೇದಗಿರಿ |

| | | | | | | |
|---|---|---|---|---|---|---|
| ೯. | ಪುಷ್ಪದಂತನಾಥ | ಮೊಸಳೆ | ಸುಗ್ರೀವರಾಜ | ಜಯರಾಮಾದೇವಿ | ಕಾಕಂದಿಪುರ | ಸಮೇದಗಿರಿ |
| ೧೦. | ಶೀತಲನಾಥ | ಕಲ್ಪವೃಕ್ಷ | ದೃಢರಥರಾಜ | ಸುನಂದಾದೇವಿ | ಭದ್ರಪುರ | ಸಮೇದಗಿರಿ |
| ೧೧. | ಶ್ರೇಯಾಂಸನಾಥ | ಭೇರುಂಡ | ವಿಷ್ಣುರಾಜ | ನಂದಾದೇವಿ | ಸಿಂಹಪುರ | ಸಮೇದಗಿರಿ |
| ೧೨. | ವಾಸುಪೂಜ್ಯನಾಥ | ಕೋಣ | ವಸುಪೂಜ್ಯರಾಜ | ಜಯಾವತಿದೇವಿ | ಚಂಪಾಪುರ | ಚಂಪಾಪುರಿ |
| ೧೩. | ವಿಮಲನಾಥ | ವರಾಹ | ಕೃತವರ್ಮರಾಜ | ಜಯಶ್ಯಾಮಾದೇವಿ | ಕಾಂಪಿಲ್ಯ | ಸಮೇದಗಿರಿ |
| ೧೪. | ಅನಂತನಾಥ | ಕರಡಿ | ಸಿಂಹಸೇನ | ಜಯಶ್ಯಾಮಾದೇವಿ | ಅಯೋಧ್ಯೆ | ಸಮೇದರಿಗಿ |
| ೧೫. | ಧರ್ಮನಾಥ | ವಜ್ರ | ಭಾನುರಾಜ | ಸುಪ್ರಭಾದೇವಿ | ರತ್ನಪುರ | ಸಮೇದಗಿರಿ |
| ೧೬. | ಶಾಂತಿನಾಥ | ಜಿಂಕೆ | ವಿಶ್ವಸೇನ | ಐರಾದೇವಿ | ಹಸ್ತಿನಾಪುರ | ಸಮೇದಗಿರಿ |
| ೧೭. | ಕುಂಥುನಾಥ | ಕುರಿ | ಶೂರಸೇನ | ಶ್ರೀಕಾಂತದೇವಿ | ಹಸ್ತಿನಾಪುರ | ಸಮೇದಗಿರಿ |
| ೧೮. | ಅರಹನಾಥ | ಮೀನು | ಸುದರ್ಶನ | ಮಿತ್ರಸೇನಾದೇವಿ | ಹಸ್ತಿನಾಪುರ | ಸಮೇದಗಿರಿ |
| ೧೯. | ಮಲ್ಲಿನಾಥ | ಕುಂಭ | ಕುಂಭರಾಜ | ಪ್ರಜಾವತಿದೇವಿ | ಮಿಥಿಲಾಪುರ | ಸಮೇದಗಿರಿ |
| ೨೦. | ಮುನಿಸುವ್ರತನಾಥ | ಆಮೆ | ಸುಮಿತ್ರರಾಜ | ಸೋಮಾದೇವಿ | ರಾಜಗೃಹ | ಸಮೇದಗಿರಿ |
| ೨೧. | ನಮಿನಾಥ | ನೀಲಕಮಲ | ವಿಜಯರಾಜ | ಪಿಪ್ಪಲಾದೇವಿ | ಮಿಥಿಲಾಪುರ | ಸಮೇದಗಿರಿ |
| ೨೨. | ನೇಮಿನಾಥ | ಶಂಖ | ಸಮುದ್ರವಿಜಯ | ಶಿವದೇವಿ | ದ್ವಾರಕಾ | ಗಿರಿನಾರ |
| ೨೩. | ಪಾರ್ಶ್ವನಾಥ | ಸರ್ಪ | ವಿಶ್ವಸೇನರಾಜ | ಬ್ರಾಹ್ಮಿಲಾದೇವಿ | ವಾರಣಾಸಿ | ಸಮೇದಗಿರಿ |
| ೨೪. | ಮಹಾವೀರ | ಸಿಂಹ | ಸಿದ್ಧಾರ್ಥರಾಜ | ತ್ರಿಶಲಾದೇವಿ | ಕುಂಡಲಪುರ | ಪಾವಾಪುರಿ |

### ೨. ತೀರ್ಥಂಕರರ ಶಿಲ್ಪಗಳು

ಗೋಕಾಕ ತಾಲೂಕಿನ ಕೆಲವು ಗ್ರಾಮಗಳಲ್ಲಿ ಕಂಡುಬಂದಿರುವ ವಿವಿಧ ತೀರ್ಥಂಕರರ ಶಿಲ್ಪಗಳ ವಿವರಗಳು ಮತ್ತು ಪ್ರತಿಮಾ ಲಕ್ಷಣಗಳು ಈ ಕೆಳಗಿನಂತಿವೆ.

### ೨.೧. ಸುಪಾರ್ಶ್ವನಾಥ ತೀರ್ಥಂಕರನ ಶಿಲ್ಪಗಳು

ಗೋಕಾಕದ ಸುಪಾರ್ಶ್ವನಾಥ ಬಸದಿಯ ಮೇಲ್ಮಡಿಯ ಗರ್ಭಗೃಹದ ದ್ವಾರಬಂಧದ ಬಲಬದಿಯಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಸುಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ೯೭ ಸೆಂ. ಮೀ. ಎತ್ತರ ಮತ್ತು ೫೫ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಸುಪಾರ್ಶ್ವನಾಥನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಇದರ ಪಾರ್ಶ್ವಗಳಲ್ಲಿ ಓಡಿಸಹಿತ ಎರಡು ಚಾಮರಗಳಿವೆ. ಶಿರದ ಮೇಲ್ಭಾಗದಲ್ಲಿ ರತ್ನತ್ರಯ ಪ್ರತೀಕವಾದ ಮುಕ್ಕೊಡೆಯಿದೆ. ಸುಪಾರ್ಶ್ವನಾಥನ ಕಾಲುಗಳ ಇಕ್ಕೆಲಗಳಲ್ಲಿ ವರನಂದಿ ಯಕ್ಷ ಮತ್ತು ಕಾಳಿ ಯಕ್ಷಿ ಸರ್ವಾಲಂಕೃತರಾಗಿ

ಆಯುಧೋಪಕರಣಗಳ ಸಹಿತ ನಿಂತಿದ್ದಾರೆ. ಶಿಲ್ಪದ ಮೇಲ್ಭಾಗದಲ್ಲಿ ಕೀರ್ತಿಮುಖದ ಅಲಂಕಾರವಿದೆ. ಶಿಲ್ಪದ ಇಕ್ಕೆಲಗಳಲ್ಲಿ ಮೇಲರ್ಧದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಮಕರತೋರಣಕ್ಕೆ ಆಧಾರವಾಗಿರುವ ಸ್ತಂಭಗಳ ಅಲಂಕಾರದಲ್ಲಿ ಕ್ರಿ. ಶ. ಸುಮಾರು ೧೧ನೆಯ ಶತಮಾನದ ಲಕ್ಷಣಗಳು ಗೋಚರಿಸುತ್ತವೆ. ಹೀಗಾಗಿ ಈ ಶಿಲ್ಪವು ಕ್ರಿ. ಶ. ಸುಮಾರು ೧೧ನೆಯ ಶತಮಾನದ ಕಾಲಾವಧಿಯಲ್ಲಿ ಖಂಡರಿಸಲ್ಪಟ್ಟಿರುವಂತೆ ತೋರುತ್ತದೆ.

### ೨.೨. ಚಂದ್ರಪ್ರಭನಾಥ ತೀರ್ಥಂಕರನ ಶಿಲ್ಪಗಳು

ಕಲ್ಲೊಳೆಯ ಶಾಂತಿನಾಥ ಬಸದಿಯ ಎಡಬದಿಯ ಗರ್ಭಗೃಹದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಚಂದ್ರಪ್ರಭನಾಥ ತೀರ್ಥಂಕರನ ಶಿಲ್ಪವಿದೆ. ೯೫ ಸೆಂ. ಮೀ. ಎತ್ತರ ಮತ್ತು ೪೫ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಪರ್ಯಂಕಾಸನದಲ್ಲಿರುವ ಈ ಶಿಲ್ಪವು ಚಂದ್ರಪ್ರಭನಾಥ ತೀರ್ಥಂಕರನು ಕೇವಲಜ್ಞಾನದ ತರುವಾಯ ಸಮವಸರಣ ಮಂಟಪದಲ್ಲಿ ಸಕಲ ಜೀವಿಗಳನ್ನುದ್ದೇಶಿಸಿ ಧರ್ಮೋಪದೇಶ ಕೈಗೊಂಡಿರುವುದನ್ನು ಪ್ರತಿನಿಧಿಸುತ್ತದೆ. ಇದು ದುಂಡು ಶಿಲ್ಪವಾಗಿರುವುದರಿಂದ ಉಳಿದ ಲಕ್ಷಣಗಳನ್ನು ತೋರಿಸಿಲ್ಲ.

### ೨.೩. ಶಾಂತಿನಾಥ ತೀರ್ಥಂಕರನ ಶಿಲ್ಪಗಳು

ಕಲ್ಲೊಳೆಯ ಶಾಂತಿನಾಥ ಬಸದಿಯ ಪ್ರಧಾನ ಗರ್ಭಗೃಹದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಶಾಂತಿನಾಥ ತೀರ್ಥಂಕರನ ಶಿಲ್ಪವಿದೆ. ೯೭ ಸೆಂ. ಮೀ. ಎತ್ತರ ಮತ್ತು ೫೫ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಪರ್ಯಂಕಾಸನದಲ್ಲಿರುವ ಈ ಶಿಲ್ಪವು ಶಾಂತಿನಾಥ ತೀರ್ಥಂಕರನು ಕೇವಲಜ್ಞಾನದ ತರುವಾಯ ಸಮವಸರಣ ಮಂಟಪದಲ್ಲಿ ಸಕಲ ಜೀವಿಗಳನ್ನುದ್ದೇಶಿಸಿ ಧರ್ಮೋಪದೇಶ ಕೈಗೊಂಡಿರುವುದನ್ನು ಪ್ರತಿನಿಧಿಸುತ್ತದೆ. ಈ ಶಿಲ್ಪದ ಮೇಲರ್ಧದ ಸುತ್ತಲೂ ಬಳ್ಳಿಯಿಂದ ರೂಪಿತವಾಗಿರುವ ಮಕರತೋರಣದ ಪ್ರಭಾವಳಿಯಲ್ಲಿ ನೃತ್ಯದಲ್ಲಿ ತೊಡಗಿರುವ, ವಾದ್ಯಗಳನ್ನು ನುಡಿಸುತ್ತಿರುವ, ಮೃದಂಗ ಬಾರಿಸುತ್ತಿರುವ ದೇವತೆಗಳ ಚಿಕಣಿ ಶಿಲ್ಪಗಳಿವೆ. ಈ ಶಿಲ್ಪದಲ್ಲಿ ಶಾಂತಿನಾಥನ ಲಾಂಛನ ಜಿಂಕೆಯನ್ನು ತೋರಿಸಿಲ್ಲವಾದರೂ ಈ ಬಸದಿಗೆ ಸಂಬಂಧಿಸಿದ ಕ್ರಿ. ಶ. ೧೨೦೪ರ ಶಾಸನದಿಂದ ಈ ಶಿಲ್ಪವು ಶಾಂತಿನಾಥ ತೀರ್ಥಂಕರನದೆಂದು ಸ್ಪಷ್ಟವಾಗುತ್ತದೆ.

### ೨.೪. ನೇಮಿನಾಥ ತೀರ್ಥಂಕರನ ಶಿಲ್ಪಗಳು

ಕಲ್ಲೊಳೆಯ ಶಾಂತಿನಾಥ ಬಸದಿಯ ನವರಂಗದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ನೇಮಿನಾಥ ತೀರ್ಥಂಕರನ ಶಿಲ್ಪವಿದೆ. ೧೨೧ ಸೆಂ. ಮೀ. ಎತ್ತರ ಮತ್ತು ೭೩ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಪರ್ಯಂಕಾಸನದಲ್ಲಿರುವ ಈ ಶಿಲ್ಪವು ನೇಮಿನಾಥ ತೀರ್ಥಂಕರನು ಕೇವಲಜ್ಞಾನದ ತರುವಾಯ ಸಮವಸರಣ ಮಂಟಪದಲ್ಲಿ ಸಕಲ ಜೀವಿಗಳನ್ನುದ್ದೇಶಿಸಿ ಧರ್ಮೋಪದೇಶ ಕೈಗೊಂಡಿರುವುದನ್ನು ಪ್ರತಿನಿಧಿಸುತ್ತದೆ. ಇದು ದುಂಡು ಶಿಲ್ಪವಾಗಿರುವುದರಿಂದ ಉಳಿದ ಲಕ್ಷಣಗಳನ್ನು ತೋರಿಸಿಲ್ಲ.

ಕುಲಗೋಡದ ಹನುಮಾನ ದೇವಾಲಯದ ಹಿಂಭಾಗದಲ್ಲಿ ಕ್ರಿ. ಶ. ಸುಮಾರು ೧೩ನೆಯ ಶತಮಾನದ ನೇಮಿನಾಥ ತೀರ್ಥಂಕರನ ಶಿಲ್ಪವಿದೆ. ೯೭ ಸೆಂ. ಮೀ. ಎತ್ತರ ಮತ್ತು ೪೯ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ನೇಮಿನಾಥನ ಶಿರದ ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಕಾಲುಗಳ ಪಾರ್ಶ್ವಗಳಲ್ಲಿ ಈತನ ಯಕ್ಷ ಮತ್ತು ಯಕ್ಷಿ ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಇಕ್ಕೆಲಗಳಲ್ಲಿ ಎರಡು ಬ್ರಹ್ಮಕಾಂತ ಪ್ರಕಾರದ ಸ್ತಂಭಗಳಿವೆ. ಇವುಗಳ ಮೇಲ್ಭಾಗದಿಂದ ಶಿಲ್ಪದ ಮೇಲರ್ಧದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ.

**೨.೫. ಪಾರ್ಶ್ವನಾಥ ತೀರ್ಥಂಕರನ ಶಿಲ್ಪಗಳು**

ಗೋಕಾಕದ ಗುಡ್ಡದ ಹತ್ತಿರ ಆಚಾರ್ಯ ೧೦೮ ಶ್ರೀ ಪಾಯಸಾಗರ ಮುನಿ ಮಹಾರಾಜರ ತಪೋವನದಲ್ಲಿ (ಗುಂಫಾ) ಕ್ರಿ. ಶ. ಸುಮಾರು ೧೨ನೆಯ ಶತಮಾನ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ೯೭ ಸೆಂ. ಮೀ. ಎತ್ತರ ಮತ್ತು ೪೯ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಹಿಂಭಾಗದಲ್ಲಿ ಬಲಪಾದದಡಿಯಿಂದ ಮುಡಿಯವರೆಗೂ ಅಂಕುಡೊಂಕಾಗಿ ಸುರುಳಿಗೊಂಡಿರುವ ಸರ್ಪವು ಆತನ ಶಿರದ ಮೇಲ್ಭಾಗದಲ್ಲಿ ತನ್ನ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಸರ್ಪದ ಮೇಲೆ ಕೊಡೆಯಿದೆ. ಇದರ ಇಕ್ಕೆಲಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಪಾರ್ಶ್ವನಾಥನ ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಧರಣೇಂದ್ರ ಯಕ್ಷನು ಚತುರ್ಭುಜನಾಗಿದ್ದಾನೆ. ಕೈಗಳಲ್ಲಿ ಕ್ರಮವಾಗಿ ಪದ್ಮ, ಅಂಕುಶ, ಪಾಶ ಮತ್ತು ಫಲಗಳಿವೆ. ಪದ್ಮಾವತಿ ಯಕ್ಷಿಯೂ ಚತುರ್ಭುಜೆಯಾಗಿದ್ದಾಳೆ. ಇವಳ ಬಲಬದಿಯ ಕೆಳಗಿನ ಕೈ ವರದಮುದ್ರೆಯಲ್ಲಿದೆ. ಉಳಿದ ಕೈಗಳಲ್ಲಿ ಕ್ರಮವಾಗಿ ಅಂಕುಶ, ಪಾಶ ಮತ್ತು ಫಲಗಳಿವೆ. ಇಬ್ಬರೂ ಕಿರೀಟಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕೇಯೂರ, ತೋಳಬಂದಿ, ಕಟಿವಸ್ತ್ರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಪಾರ್ಶ್ವನಾಥನ ಇಕ್ಕೆಲಗಳಲ್ಲಿ ಎರಡು ಬ್ರಹ್ಮಕಾಂತ ಪ್ರಕಾರದ ಸ್ತಂಭಗಳಿವೆ. ಇವುಗಳ ಮೇಲ್ಭಾಗದಿಂದ ಶಿಲ್ಪದ ಮೇಲರ್ಧದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಶಿಲ್ಪದ ಮೇಲ್ಭಾಗದ ತುದಿಯಲ್ಲಿ ಕೀರ್ತಿಮುಖದ ಅಲಂಕಾರವಿದೆ.

ಕೊಣ್ಣೂರದ ಪಾರ್ಶ್ವನಾಥ ಬಸದಿಯ ಅಂತರಾಳದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ೩೩ ಸೆಂ. ಮೀ. ಎತ್ತರ ಮತ್ತು ೧೯ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನು ಆಜಾನುಲಂಬಬಾಹು ಮುದ್ರೆಯಲ್ಲಿದ್ದಾನೆ. ಪಾರ್ಶ್ವನಾಥನ ಹಿಂಬದಿಯಲ್ಲಿ ಪಾದದಡಿಯಿಂದ ಮುಡಿಯವರೆಗೂ ಅಂಕುಡೊಂಕಾಗಿ ಸುರಳಿಗೊಂಡಿರುವ ಸರ್ಪವು ಶಿರದ ಮೇಲ್ಭಾಗದಲ್ಲಿ ತನ್ನ ಏಳು ಹೆಡೆಗಳನ್ನು ಕೊಡೆಯಾಗಿ ಹಿಡಿದ ಹಾಗೆ ಬಿಚ್ಚಿಕೊಂಡಿದೆ. ತಲೆಯ ಮಧ್ಯದಲ್ಲಿ ತಪಸ್ವಿ ಲಕ್ಷಣವಾದ ಉಷ್ಣೀಷವಿದೆ. ಭುಜದ ಇಕ್ಕೆಲಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಕಂಠ ಮತ್ತು ಕಿಬ್ಬೊಟ್ಟೆಯ ಭಾಗಗಳಲ್ಲಿ ರೇಖೆಗಳಿಂದ ಸಹಜವಾದ ಸೂಕ್ಷ್ಮ ನೆರಿಗೆಗಳನ್ನು ಬಿಡಿಸಲಾಗಿದೆ. ಪಾರ್ಶ್ವನಾಥನ ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಪ್ರಭಾವಳಿ ಮತ್ತು ಪಾದಪೀಠದ ಮೇಲಿರುವ ಶಾಸನವು ಈ ಶಿಲ್ಪವನ್ನು ಶ್ರೀ ಕುಮಾರಸೇನದೇವನ ಶಿಷ್ಯ ಮೂಲಸಂಘ ಪರಂಪರೆಯ ನಾಗಸೇನದೇವನು ಶ್ರಾವಕರಿಂದ ಮಾಡಿಸಿ ಪ್ರತಿಷ್ಠಾಪಿಸಿದನೆಂದು ಉಲ್ಲೇಖಿಸುತ್ತದೆ.

ಕಲ್ಹೊಳೆಯ ಶಾಂತಿನಾಥ ಬಸದಿಯ ಬಲಬದಿಯ ಗರ್ಭಗೃಹದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ೧೫೫ ಸೆಂ. ಮೀ. ಎತ್ತರ ಮತ್ತು ೭೫ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಹಿಂಭಾಗದಲ್ಲಿ ಬಲಪಾದದಡಿಯಿಂದ ಮುಡಿಯವರೆಗೂ ಅಂಕುಡೊಂಕಾಗಿ ಸುರುಳಿಗೊಂಡಿರುವ ಸರ್ಪವು ಶಿರದ ಮೇಲ್ಭಾಗದಲ್ಲಿ ತನ್ನ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಸರ್ಪದ ಮೇಲೆ ಕೊಡೆಯಿದೆ. ಪಾರ್ಶ್ವನಾಥನ ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಧರಣೇಂದ್ರ ಯಕ್ಷನು ಚತುರ್ಭುಜನಾಗಿದ್ದಾನೆ. ಕೈಗಳಲ್ಲಿ ಕ್ರಮವಾಗಿ ಪದ್ಮ, ಅಂಕುಶ, ಪಾಶ ಮತ್ತು ಫಲಗಳಿವೆ. ಪದ್ಮಾವತಿ ಯಕ್ಷಿಯೂ ಚತುರ್ಭುಜೆಯಾಗಿದ್ದಾಳೆ. ಇವಳ ಬಲಬದಿಯ ಕೆಳಗಿನ ಕೈ ವರದಮುದ್ರೆಯಲ್ಲಿದೆ. ಉಳಿದ ಕೈಗಳಲ್ಲಿ ಕ್ರಮವಾಗಿ ಅಂಕುಶ, ಪಾಶ ಮತ್ತು ಫಲಗಳಿವೆ. ಇಬ್ಬರೂ ಕಿರೀಟಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕೇಯೂರ, ತೋಳಬಂದಿ, ಕಟಿವಸ್ತ್ರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಪಾರ್ಶ್ವನಾಥನ ಇಕ್ಕೆಲಗಳಲ್ಲಿ ಎರಡು ಬ್ರಹ್ಮಕಾಂತ ಪ್ರಕಾರದ ಸ್ತಂಭಗಳಿವೆ. ಇವುಗಳ ಮೇಲ್ಭಾಗದಿಂದ ಶಿಲ್ಪದ ಮೇಲರ್ಧದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಶಿಲ್ಪದ ಮೇಲ್ಭಾಗದಲ್ಲಿ ಕೀರ್ತಿಮುಖದ ಅಲಂಕಾರವಿದೆ.

ಕುಲಗೋಡದ ಹನುಮಾನ ದೇವಾಲಯದ ಹಿಂಭಾಗದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ೯೩ ಸೆಂ. ಮೀ. ಎತ್ತರ ಮತ್ತು ೪೫ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಹಿಂಭಾಗದಲ್ಲಿ ಬಲಪಾದದಡಿಯಿಂದ ಮುಡಿಯವರೆಗೂ ಅಂಕುಡೊಂಕಾಗಿ ಸುರುಳಿಗೊಂಡಿರುವ ಸರ್ಪವು ಶಿರದ ಮೇಲ್ಭಾಗದಲ್ಲಿ ತನ್ನ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಸರ್ಪದ ಮೇಲೆ ಕೊಡೆಯಿದೆ. ಪಾರ್ಶ್ವನಾಥನ ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಮೇಲರ್ಧದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಇದರಲ್ಲಿ ಕಮಠೋಪಸರ್ಗದ ಕಥಾನಿರೂಪಣೆಯ ದೃಶ್ಯವಿದ್ದಂತೆ ತೋರುತ್ತದೆ. ಆದರೆ ಇದು ತುಂಬಾ ತ್ರುಟಿತವಾಗಿರುವುದರಿಂದ ವಿವರಗಳು ಅಸ್ಪಷ್ಟವಾಗಿವೆ.

ಯಾದವಾಡದ ಪಾರ್ಶ್ವನಾಥ ಬಸದಿಯ ಗರ್ಭಗೃಹದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ೯೫ ಸೆಂ. ಮೀ. ಎತ್ತರ ಮತ್ತು ೪೩ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಹಿಂಭಾಗದಲ್ಲಿ ಬಲಪಾದದಡಿಯಿಂದ ಮುಡಿಯವರೆಗೂ ಅಂಕುಡೊಂಕಾಗಿ ಸುರುಳಿಗೊಂಡಿರುವ ಸರ್ಪವು ಶಿರದ ಮೇಲ್ಭಾಗದಲ್ಲಿ ತನ್ನ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಸರ್ಪದ ಮೇಲೆ ಕೊಡೆಯಿದೆ. ಪಾರ್ಶ್ವನಾಥನ ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಪಾರ್ಶ್ವನಾಥನ ಇಕ್ಕೆಲಗಳಲ್ಲಿ ಎರಡು ಬ್ರಹ್ಮಕಾಂತ ಪ್ರಕಾರದ ಸ್ತಂಭಗಳಿವೆ. ಇವುಗಳ ಮೇಲ್ಭಾಗದಿಂದ ಶಿಲ್ಪದ ಮೇಲರ್ಧದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಶಿಲ್ಪದ ಮೇಲ್ಭಾಗದ ತುದಿಯಲ್ಲಿ ಕೀರ್ತಿಮುಖದ ಅಲಂಕಾರವಿದೆ. ಶಿಲ್ಪದ ಇಕ್ಕೆಲಗಳಲ್ಲಿರುವ ಸ್ತಂಭಗಳ ಮೇಲೆ ಎರಡೆರಡು ಮತ್ತು ಪ್ರಭಾವಳಿಯಲ್ಲಿ ತಲಾ ಮೂರು ಮೂರು ಪರ್ಯಂಕಾಸೀನ ತೀರ್ಥಂಕರರ ಚಿಕಣಿ ಶಿಲ್ಪಗಳಿವೆ.

### ೨.೧೬. ಚೌವ್ವೀಸ ತೀರ್ಥಂಕರರ ಶಿಲ್ಪಗಳು

ಗೋಕಾಕದ ಸುಪಾರ್ಶ್ವನಾಥ ಬಸದಿಯ ಮೇಲ್ಮಹಡಿಯ ಗರ್ಭಗೃಹದ ದ್ವಾರಬಂಧದ ಎಡಬದಿಯಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ ಶಿಲ್ಪವಿದೆ. ೯೩ ಸೆಂ. ಮೀ. ಎತ್ತರ ಮತ್ತು ೪೭ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಆದಿನಾಥನು ಆಜಾನುಲಂಬಬಾಹು ಮುದ್ರೆಯಲ್ಲಿದ್ದಾನೆ. ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಇದರ ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಆದಿನಾಥನ ಕೇಶರಾಶಿ ಸುರುಳಿಯಾಗಿ ಭುಜಗಳ ಮೇಲೆ ಹರಡಿಕೊಂಡಿದೆ. ಶಿರದ ಮೇಲ್ಭಾಗದಲ್ಲಿ ರತ್ನತ್ರಯ ಪ್ರತೀಕವಾದ ಮುಕ್ಕೊಡೆಯ ರಚನೆಯಿದೆ. ಈ ಶಿಲ್ಪದ ಸುತ್ತಲೂ ಇಪ್ಪತ್ಮೂರು ತೀರ್ಥಂಕರರ ಪರ್ಯಂಕಾಸನದಲ್ಲಿರುವ ಚಿಕಣಿ ಶಿಲ್ಪಗಳ ಸಾಲು ಪ್ರಭಾವಳಿಯನ್ನು ರೂಪಿಸಿದಂತಿದೆ. ಆದಿನಾಥನ ಕಾಲುಗಳ ಇಕ್ಕೆಲಗಳಲ್ಲಿ ಗೋಮುಖ ಯಕ್ಷ ಮತ್ತು ಚಕ್ರೇಶ್ವರಿ ಯಕ್ಷಿ ಸರ್ವಾಲಂಕೃತರಾಗಿ ಆಯುಧೋಪಕರಣಗಳ ಸಹಿತ ಕ್ರಮವಾಗಿ ಸುಖಾಸನ ಮತ್ತು ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಶಿಲ್ಪದ ಮೇಲ್ಭಾಗದಲ್ಲಿ ಕೀರ್ತಿಮುಖದ ಅಲಂಕಾರವಿದೆ.

### ೩. ಯಕ್ಷ-ಯಕ್ಷಿ ಶಿಲ್ಪಗಳು

ಜೈನ ಪರಂಪರೆಯಲ್ಲಿ ಅತೀ ಪ್ರಾಚೀನ ಕಾಲದಿಂದಲೂ ಯಕ್ಷ-ಯಕ್ಷಿಯರ ಆರಾಧನೆ ರೂಢಿಯಲ್ಲಿದೆ. ಆದರೆ ಪ್ರತಿಯೊಬ್ಬ ತೀರ್ಥಂಕರನಿಗೂ ಒಬ್ಬ ಯಕ್ಷ ಮತ್ತು ಒಬ್ಬ ಯಕ್ಷಿ ಶಾಸನ ದೇವತೆಗಳೆಂಬ ಪರಿಕಲ್ಪನೆ ಕ್ರಿಸ್ತಶಕಾರಂಭದಿಂದೀಚೆಗೆ ಬೆಳೆದು ಬಂದಂತೆ ತೋರುತ್ತದೆ. ವಸುನಂದಾಚಾರ್ಯನು ತನ್ನ ಪ್ರತಿಷ್ಠಾಪಾಠ ಕೃತಿಯಲ್ಲಿ ಆಯಾ ತೀರ್ಥಂಕರನಿಗೆ ನಿಯಮಿತವಾಗಿರುವ ಯಕ್ಷನನ್ನು ಬಲಪಾರ್ಶ್ವದಲ್ಲಿಯೂ, ಯಕ್ಷಿಯನ್ನು ಎಡಪಾರ್ಶ್ವದಲ್ಲಿಯೂ, ಪಾದಪೀಠದಲ್ಲಿ ಆ ತೀರ್ಥಂಕರನ ಲಾಂಛನವನ್ನೂ ಸ್ಥಾಪಿಸಬೇಕೆಂದು ಉಲ್ಲೇಖಿಸಿದ್ದಾನೆ. ಜಯಸೇನನು ತನ್ನ ಪ್ರತಿಷ್ಠಾಪಾಠ ಕೃತಿಯಲ್ಲಿ ಸ್ಥಿರ ಮತ್ತು ಚರ ತೀರ್ಥಂಕರರ ಶಿಲ್ಪಗಳು ಮುಕ್ಕೊಡೆ, ಚೈತ್ಯವೃಕ್ಷ, ಚಾಮರ, ಸಿಂಹಪೀಠ, ಪ್ರಭಾಮಂಡಲ, ದಿವ್ಯಧ್ವನಿ, ಪುಷ್ಪವೃಷ್ಠಿ ಮತ್ತು ದುಂದುಭಿಗಳೆಂಬ ಅಷ್ಟವಿಧ ಮಹಾಪ್ರಾತಿಹಾರ್ಯಗಳುಳ್ಳವೂ, ಪಾದಪೀಠದಲ್ಲಿ ಲಾಂಛನವುಳ್ಳವೂ, ಬಲಪಾರ್ಶ್ವದಲ್ಲಿ ಯಕ್ಷ ಮತ್ತು ಎಡಪಾರ್ಶ್ವದಲ್ಲಿ ಯಕ್ಷಿಯುಳ್ಳವೂ ಆಗಿರಬೇಕೆಂದು ಪ್ರಸ್ತಾಪಿಸಿದ್ದಾನೆ. ಅದೇ ರೀತಿ ತಿಲೋಯಪಣ್ಣತ್ತಿ, ಪ್ರವಚನಸಾರೋದ್ಧಾರ, ಅಭಿದಾನ ಚಿಂತಾಮಣಿ, ಪ್ರತಿಷ್ಠಾಸಾರಸಂಗ್ರಹ, ಪ್ರತಿಷ್ಠಾಸಾರೋದ್ಧಾರ, ಪ್ರತಿಷ್ಠಾತಿಲಕ, ನಿರ್ವಾಣಕಲಿಕಾ, ಅಪರಾಜಿತಪೃಚ್ಛಾ, ರೂಪಮಂಡನ, ಪ್ರತಿಷ್ಠಾಪಾಠ, ಆಚಾರದಿನಕರ, ಮಾನಸಾರ, ಬೃಹತ್ಸಂಹಿತೆ, ಅಭಿಲಷಿತಾರ್ಥ ಚಿಂತಾಮಣಿ, ರಾಜವಲ್ಲಭ, ದೀಪಾರ್ಣವ, ದೇವತಾಮೂರ್ತಿ ಪ್ರಕರಣ ಮೊದಲಾದ ಸಾಹಿತ್ಯ, ಶಾಸ್ತ್ರ, ಪುರಾಣಗಳಲ್ಲೂ ಯಕ್ಷ-ಯಕ್ಷಿಯರ ವಿವರಣೆ ಮತ್ತು ಪ್ರತಿಮಾ ಲಕ್ಷಣಗಳು ಪ್ರಸ್ತಾಪವಾಗಿವೆ.[13]

ತೀರ್ಥಂಕರರ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಅವರ ಕಾಲುಗಳ ಬಲಬದಿಯಲ್ಲಿ ಯಕ್ಷ ಮತ್ತು ಎಡಬದಿಯಲ್ಲಿ ಯಕ್ಷಿಯ ಉಬ್ಬುಶಿಲ್ಪಗಳಿರುತ್ತವೆ. ಅವರು ತೀರ್ಥಂಕರರಿಗೆ ತಪಸ್ಸಿನ ಸಂದರ್ಭದಲ್ಲಿ ಉಂಟಾಗುವ ಉಪಸರ್ಗಾದಿಗಳನ್ನು ತಮ್ಮ ಆತ್ಮ ಪ್ರೇರಣೆಯಿಂದ ಮುಂದಾಗಿ ಪರಿಹರಿಸಿರುತ್ತಾರೆ. ಜೊತೆಗೆ ತೀರ್ಥಂಕರರ ಉಪದೇಶದಲ್ಲಿ ಶ್ರದ್ಧೆ ಮತ್ತು ಭಕ್ತಿಯನ್ನಿಟ್ಟು ಅದನ್ನು ರಕ್ಷಿಸಿ ಪ್ರಸಾರ ಮಾಡುತ್ತಿರುತ್ತಾರೆ. ಹೀಗಾಗಿ ಅವರನ್ನು ಶಾಸನ ದೇವತೆಗಳೆಂದೂ, ತೀರ್ಥಂಕರರ ರಕ್ಷಕರೆಂತಲೂ ಕರೆಯಲಾಗುತ್ತದೆ. ಅವರು ಭಕ್ತರು ಸಲ್ಲಿಸಿದ ಪೂಜೆಗೆ

ತಕ್ಕ ಪ್ರತಿಫಲವನ್ನು ಕೊಡುತ್ತಾರೆಂಬ ನಂಬಿಕೆಯೂ ಇರುವುದು. ಹೀಗಾಗಿ ಅವರ ಕುರಿತು ಅನೇಕ ಕಥೆಗಳು, ನೋಂಪಿಗಳು, ಪೂಜೆಗಳು ರೂಢಿಯಲ್ಲಿವೆ. ಜೈನ ಪರಂಪರೆಯಲ್ಲಿ ಸರಸ್ವತಿಯ ಪರಿಕಲ್ಪನೆ ವಿಶಿಷ್ಟವಾಗಿ ಬೆಳೆದು ಬಂದಿದೆ. ತೀರ್ಥಂಕರರು ತಮಗೆ ಕೇವಲಜ್ಞಾನದ ತರುವಾಯ ಸಮವಸರಣ ಮಂಟಪದಲ್ಲಿ ಸಕಲ ಜೀವಿಗಳನ್ನುದ್ದೇಶಿಸಿ ಕೈಗೊಳ್ಳುವ ಧರ್ಮೋಪದೇಶವೇ (ಜಿನೇಂದ್ರವಾಣಿ) ಸರಸ್ವತಿ ಎಂಬುದು ಜೈನ ಧರ್ಮೀಯರ ನಂಬಿಕೆಯಾಗಿದೆ. ತೀರ್ಥಂಕರರ ಉಪದೇಶಗಳನ್ನು ಗಣಧರರು ದ್ವಾದಶಾಂಗದಲ್ಲಿ ಸಂಗ್ರಹಿಸಿದರು. ಆ ಸಂಗ್ರಹವನ್ನು ಶ್ರುತ ಎಂದು ಕರೆಯಲಾಗುತ್ತದೆ. ಅದರ ಅಧಿದೇವತೆ ಶ್ರುತದೇವಿ ಎಂತಲೂ ಹೇಳಲಾಗುತ್ತದೆ. ಇವಳು ಅನೇಕ ಜೈನ ಕೃತಿಗಳ ಪ್ರಾರ್ಥನಾ ಪದ್ಯಗಳು ಮತ್ತು ವಿವರಗಳಲ್ಲಿ ವರ್ಣಿಸಲ್ಪಟ್ಟಿದ್ದಾಳೆ. ಶಾಂತೀಶ್ವರ ಕವಿಯ ಶಾರದಾ ಚೌಪದದಲ್ಲಿ ಜೈನ ಧರ್ಮಾನುಸಾರ ಸರಸ್ವತಿಯ ಪ್ರತಿಮಾ ಲಕ್ಷಣಗಳು ಮತ್ತು ಮಹಿಮೆಯ ಪ್ರಸ್ತಾಪಗಳಿವೆ. ಶಿಲ್ಪಗಳಲ್ಲಿ ಇವಳು ಸವ್ಯಲಲಿತಾಸನದಲ್ಲಿದ್ದು, ಚತುರ್ಭುಜಗಳಿರುತ್ತವೆ. ಅವುಗಳಲ್ಲಿ ಮುಂದಿನ ಎರಡು ಕೈಗಳು ಅಭಯಮುದ್ರೆ ಮತ್ತು ಜ್ಞಾನಮುದ್ರೆಯಲ್ಲಿರುತ್ತವೆ. ಹಿಂದಿನ ಎರಡು ಕೈಗಳಲ್ಲಿ ಕ್ರಮವಾಗಿ ಅಕ್ಷಮಾಲೆ ಮತ್ತು ಹಸ್ತಪ್ರತಿಗಳಿರುತ್ತವೆ. ಪಾದಪೀಠದಲ್ಲಿ ವಾಹನ ಮಯೂರದ ನಿರೂಪಣೆ ಇರುತ್ತದೆ. ವಿವಿಧ ವಸ್ತ್ರಾಭರಣಗಳಿಂದ ಅಲಂಕೃತಳಾಗಿರುತ್ತಾಳೆ.[14] ಜೈನ ಧರ್ಮದ ದಿಗಂಬರ ಪಂಥದ ಸಂಹಿತೆಗಳ ಪ್ರಕಾರ ವರ್ತಮಾನ ಕಾಲದ ಇಪ್ಪತ್ನಾಲ್ಕು ತೀರ್ಥಂಕರರಿಗೆ ಸಂಬಂಧಿಸಿರುವ ಯಕ್ಷ-ಯಕ್ಷಿಯರ ವಿವರಗಳು ಈ ಕೆಳಗಿನಂತಿವೆ.[15]

| ಅ.ಸಂ. | ಯಕ್ಷರು | ವಾಹನ | ಭುಜಗಳು | ಆಯುಧಗಳು |
|---|---|---|---|---|
| ೧. | ಗೋಮುಖ | ವೃಷಭ | ನಾಲ್ಕು | ಪರಶು, ಫಲ, ಅಕ್ಷಸೂತ್ರ, ವರದ |
| ೨. | ಮಹಾಯಕ್ಷ | --- | ಎಂಟು | ಖಡ್ಗ, ದಂಡ, ಪರಶು, ವರದ, ಚಕ್ರ, ತ್ರಿಶೂಲ, ಪದ್ಮ, ಅಂಕುಶ |
| ೩. | ತ್ರಿಮುಖ | ಮಯೂರ | ಆರು | ದಂಡ, ತ್ರಿಶೂಲ, ಕರ್ತಿಕಾ, ಚಕ್ರ, ಅಸಿ, ಸೃಣಿ |
| ೪. | ಯಕ್ಷೇಶ್ವರ | ಗಜ | ನಾಲ್ಕು | ಬಾಣ, ಖಡ್ಗ, ಧನುಷ್, ಗುರಾಣಿ |
| ೫. | ತುಂಬುರು | ಗರುಡ | ನಾಲ್ಕು | ಎರಡು ಕೈಯಲ್ಲಿ ಸರ್ಪ, ವರದ, ಫಲ |
| ೬. | ಕುಸುಮ | ಮೃಗ | ನಾಲ್ಕು | ಗುರಾಣಿ, ಅಭಯ, ಕುಂತ, ವರದ |
| ೭. | ವರನಂದಿ | ಸಿಂಹ | ಎರಡು | ಶೂಲ, ದಂಡ |
| ೮. | ಶ್ಯಾಮ(ವಿಜಯ) | ಕಪೋತ | ನಾಲ್ಕು | ಅಕ್ಷಸೂತ್ರ, ವರದ, ಪರಶು, ಫಲ |
| ೯. | ಅಜಿತ | ಕೂರ್ಮ | ನಾಲ್ಕು | ಅಕ್ಷಸೂತ್ರ, ವರದ, ಶಕ್ತಿ, ಫಲ |
| ೧೦. | ಬ್ರಹ್ಮ | ಪದ್ಮ | ಎಂಟು | ಬಾಣ, ಧನುಷ್, ಪರಶು, ದಂಡ, ಖಡ್ಗ, ಗುರಾಣಿ, ವರದ, ವಜ್ರ |
| ೧೧. | ಈಶ್ವರ | ವೃಷಭ | ನಾಲ್ಕು | ಅಕ್ಷಸೂತ್ರ, ಪದ್ಮ, ತ್ರಿಶೂಲ, ದಂಡ |
| ೧೨. | ಕುಮಾರ | ಹಂಸ | ಆರು | ಬಾಣ, ಗದೆ, ವರದ, ಧನುಷ್,ನಕುಲ, ಫಲ |
| ೧೩. | ಷಣ್ಮುಖ | ಮಯೂರ | ಹನ್ನೆರಡು | ಮೇಲಿನ ಎಂಟು ಕೈಗಳಲ್ಲಿ ಪರಶು, ಶೇಷ, ನಾಲ್ಕು ಕೈಗಳಲ್ಲಿ ಖಡ್ಗ, ಅಕ್ಷಸೂತ್ರ, ಗುರಾಣಿ, ದಂಡ |
| ೧೪. | ಪಾತಾಳ | ಮಕರ | ಆರು | ಅಂಕುಶ, ಶೂಲ, ಪದ್ಮ, ಕಶಾ, ಹಲ, ಫಲ |
| ೧೫. | ಕಿನ್ನರ | ಮೀನು | ಆರು | ಬೀಜಪೂರ, ಗದೆ, ಅಭಯ, ನಕುಲ, ಪದ್ಮ, ಅಕ್ಷಸೂತ್ರ |
| ೧೬. | ಗರುಡ | ವರಾಹ | ನಾಲ್ಕು | ವಜ್ರ, ಪದ್ಮ, ಚಕ್ರ, ಫಲ |
| ೧೭. | ಗಂಧರ್ವ | ಪಕ್ಷಿ | ನಾಲ್ಕು | ನಾಗ, ಪಾಶ, ಬಾಣ, ಧನುಷ್ |
| ೧೮. | ಮಹೇಂದ್ರ | ಶಂಖ | ಹನ್ನೆರಡು | ಬಾಣ, ಪದ್ಮ, ಫಲ, ಮಾಲಾ, ಅಕ್ಷಸೂತ್ರ, ಅಭಯ, ಧನುಷ್, ವಜ್ರ, ಪಾಶ, ಮುದ್ಗರ, ಅಂಕುಶ, ವರದ |

| | | | | |
|---|---|---|---|---|
| ೧೯. | ಕುಬೇರ | ಆನೆ | ಎಂಟು | ಶೂಲ, ಪರಶು, ಅಭಯ, ವರದ, ಮುದ್ಗರ, ಅಕ್ಷಸೂತ್ರ, ಬೀಜಪೂರ, ಶಕ್ತಿ |
| ೨೦. | ವರುಣ (ಪುರುಷವರ) | ವೃಷಭ | ನಾಲ್ಕು | ವರದ, ಖಡ್ಗ, ಗುರಾಣಿ, ಫಲ |
| ೨೧. | ಭೃಕುಟಿ (ವಿದ್ಯುತ್ಪ್ರಭ) | --- | ಎಂಟು | ಗುರಾಣಿ, ಅಸಿ, ಧನುಷ್, ಬಾಣ, ಅಂಕುಶ, ಪದ್ಮ, ಚಕ್ರ, ವರದ |
| ೨೨. | ಗೋಮೇದ(ಸರ್ವಾಹ್ನ) | ನೃವಾಹನ | ಆರು | ಮುದ್ಗರ, ಕುಠಾರ, ದಂಡ, ಫಲ, ವಜ್ರ, ವರದ |
| ೨೩. | ಧರಣೇಂದ್ರ | ಕೂರ್ಮ | ನಾಲ್ಕು | ನಾಗ, ವರದ, ನಾಗ, ಪಾಶ |
| ೨೪. | ಮಾತಂಗ | ಆನೆ | ಎರಡು | ವರದ, ಫಲ |

| ಅ.ಸಂ. | ಯಕ್ಷಿಯರು | ವಾಹನ | ಭುಜಗಳು | ಆಯುಧಗಳು |
|---|---|---|---|---|
| ೧. | ಚಕ್ರೇಶ್ವರಿ | ಪದ್ಮ | ಹನ್ನೆರಡು | ಎರಡು ಕೈಯಲ್ಲಿ ವಜ್ರ, ಎಂಟು ಕೈಯಲ್ಲಿ ಚಕ್ರ, ವರದ, ಫಲ,ಗರುಡ, ಎರಡು ಕೈಯಲ್ಲಿ ಚಕ್ರ, ವರದ,ಫಲ |
| ೨. | ರೋಹಿಣಿ | ಲೋಹಾಸನ | ನಾಲ್ಕು | ಚಕ್ರ, ಶಂಖ, ಅಭಯ, ವರದ |
| ೩. | ಪ್ರಜ್ಞಪ್ತಿ | ಪಕ್ಷಿ | ಆರು | ಅರ್ಧಚಂದ್ರ, ಪರಶು, ಫಲ, ಖಡ್ಗ, ಕಮಂಡಲ, ವರದ |
| ೪. | ವಜ್ರಶೃಂಖಲಾ | ಹಂಸ | ನಾಲ್ಕು | ನಾಗಪಾಶ, ಅಕ್ಷಸೂತ್ರ, ಫಲ, ವರದ |
| ೫. | ಪುರುಷದತ್ತಾ | ಗಜ | ನಾಲ್ಕು | ಚಕ್ರ, ವಜ್ರ, ಫಲ, ವರದ |
| ೬. | ಮನೋವೇಗೆ | ಅಶ್ವ | ನಾಲ್ಕು | ವರದ, ಅಸಿ, ಗುರಾಣಿ, ಫಲ |
| ೭. | ಕಾಳಿ | ವೃಷಭ | ನಾಲ್ಕು | ಘಂಟೆ, ತ್ರಿಶೂಲ, ಫಲ, ವರದ |
| ೮. | ಜ್ವಾಲಾಮಾಲಿನಿ | ಮಹಿಷಿ | ಎಂಟು | ಚಕ್ರ, ಧನುಷ್, ಪಾಶ, ಗುರಾಣಿ, ತ್ರಿಶೂಲ, ಬಾಣ, ಮತ್ಸ್ಯ, ಖಡ್ಗ |
| ೯. | ಮಹಾಕಾಳಿ | ಕೂರ್ಮ | ನಾಲ್ಕು | ವಜ್ರ, ಫಲ, ಮುದ್ಗರ, ವರದ |
| ೧೦. | ಮಾನವಿ | ಸೂಕರ | ನಾಲ್ಕು | ಮಾಲಾ, ವರದ, ಮತ್ಸ್ಯ, ಫಲ |
| ೧೧. | ಗೌರಿ | ಮೃಗ | ನಾಲ್ಕು | ಮುದ್ಗರ, ಪದ್ಮ, ಕಲಶ, ವರದ |
| ೧೨. | ಗಾಂಧಾರಿ | ಮಕರ | ನಾಲ್ಕು | ಪದ್ಮ, ವರದ, ಪದ್ಮ, ಮುಸಲ |
| ೧೩. | ವೈರೋಟಿ | ಅಜಗರ | ನಾಲ್ಕು | ಎರಡು ಕೈಗಳಲ್ಲಿ ಸರ್ಪ, ಧನುಷ್, ಬಾಣ |
| ೧೪. | ಅನಂತಮತಿ | ಹಂಸ | ನಾಲ್ಕು | ಧನುಷ್, ಬಾಣ, ಫಲ, ವರದ |
| ೧೫. | ಮಾನಸಿ | ವ್ಯಾಘ್ರ | ಆರು | ಪದ್ಮ, ಧನುಷ್, ವರದ, ಅಂಕುಶ, ಬಾಣ, ಪದ್ಮ |
| ೧೬. | ಮಹಾಮಾನಸಿ | ಮಯೂರ | ನಾಲ್ಕು | ಫಲ, ಚಕ್ರ, ಖಡ್ಗ, ವರದ |
| ೧೭. | ಜಯಾ | ಸುಕರ | ನಾಲ್ಕು | ಶಂಖ, ಅಸಿ, ಚಕ್ರ, ವರದ |
| ೧೮. | ತಾರಾಮತಿ (ವಿಜಯಾ) | ಹಂಸ | ನಾಲ್ಕು | ಸರ್ಪ, ವಜ್ರ, ಮೃಗ, ವರದ |
| ೧೯. | ಅಪರಾಜಿತಾ | ಅಷ್ಟಾಪದ | ನಾಲ್ಕು | ಗುರಾಣಿ, ಖಡ್ಗ, ಫಲ, ವರದ |
| ೨೦. | ಬಹುರೂಪಿಣಿ | ನಾಗ | ನಾಲ್ಕು | ಗುರಾಣಿ, ಖಡ್ಗ, ಫಲ, ವರದ |
| ೨೧. | ಚಾಮುಂಡಿ | ಮಕರ | ನಾಲ್ಕು | ಯಷ್ಟಿ, ಗುರಾಣಿ, ಅಕ್ಷಸೂತ್ರ, ಖಡ್ಗ |
| ೨೨. | ಕೂಷ್ಮಾಂಡಿನಿ | ಸಿಂಹ | ಎರಡು | ಆಮ್ರಸ್ತಬಕ, ಪುತ್ರನಿಗೆ ಶುಭಕೋರುವ ಹಸ್ತ |
| ೨೩. | ಪದ್ಮಾವತಿ | ಪದ್ಮ | ನಾಲ್ಕು | ಅಂಕುಶ, ಅಕ್ಷಸೂತ್ರ, ಪದ್ಮ, ವರದ |
| ೨೪. | ಸಿದ್ಧಾಯಿನಿ | ಸಿಂಹ/ಭದ್ರಾಸನ | ಎರಡು | ವರದ, ಪುಸ್ತಕ |

ಗೋಕಾಕ ತಾಲೂಕಿನ ಕೆಲವು ಗ್ರಾಮಗಳಲ್ಲಿರುವ ಜೈನ ಯಕ್ಷ-ಯಕ್ಷಿಯ ಮತ್ತು ಸರಸ್ವತಿ ಶಿಲ್ಪಗಳ ವಿವರಗಳು ಮತ್ತು ಅವುಗಳ ಪ್ರತಿಮಾ ಲಕ್ಷಣಗಳು ಈ ಕೆಳಗಿನಂತಿವೆ.

**೩.೧. ಧರಣೇಂದ್ರ ಯಕ್ಷನ ಶಿಲ್ಪ**

ಗೋಕಾಕದ ಆಚಾರ್ಯ ೧೦೮ ಶ್ರೀ ಪಾಯಸಾಗರ ಮುನಿ ಮಹಾರಾಜರ ತಪೋವನದಲ್ಲಿ (ಗುಂಫಾ) ಕ್ರಿ. ಶ. ಸುಮಾರು ೧೨ನೆಯ ಶತಮಾನದ ಧರಣೇಂದ್ರ ಯಕ್ಷನ ಶಿಲ್ಪವಿದೆ. ೮೧ ಸೆಂ. ಮೀ. ಎತ್ತರ ಮತ್ತು ೪೩ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಮೇಲರ್ಧ ಮನುಷ್ಯಾಕಾರದ ಮತ್ತು ಕೆಳರ್ಧ ಸರ್ಪಾಕಾರದ ಶರೀರವುಳ್ಳ ಧರಣೇಂದ್ರ ಯಕ್ಷನ ಶಿರದ ಮೇಲ್ಭಾಗದಲ್ಲಿ ಐದು ಹೆಡೆಗಳ ಸರ್ಪವಿದೆ. ಈತನ ಮುಖ ಮತ್ತು ಮುಂಡ ಮನುಷ್ಯಾಕಾರದಲ್ಲಿವೆ. ದ್ವಿಭುಜನಾಗಿರುವ ಧರಣೇಂದ್ರನ ಕೈಗಳಲ್ಲಿರುವ ಆಯುಧಗಳು ಅಸ್ಪಷ್ಟವಾಗಿವೆ. ಕಿರೀಟಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕೇಯೂರ, ತೋಳಬಂದಿ, ಕಟಿವಸ್ತ್ರ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಶಿಲ್ಪದ ಮೇಲರ್ಧದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ.

**೩.೨. ಸರಸ್ವತಿ ಶಿಲ್ಪ**

ಕಲ್ಲೊಳೆಯ ಶಾಂತಿನಾಥ ಬಸದಿಯ ಸಭಾಮಂಟಪದಲ್ಲಿ ಕ್ರಿ. ಶ. ಸುಮಾರು ೧೩ನೆಯ ಶತಮಾನದ ಸರಸ್ವತಿಯ ಶಿಲ್ಪವಿದೆ. ೩೧ ಸೆಂ. ಮೀ. ಎತ್ತರ ಮತ್ತು ೨೫ ಸೆಂ. ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಖಂಡರಿಸಲ್ಪಟ್ಟಿದೆ. ಸವ್ಯಲಲಿತಾಸನದಲ್ಲಿರುವ ಸರಸ್ವತಿ ಚತುರ್ಭುಜೆಯಾಗಿದ್ದಾಳೆ. ಕೈಗಳಲ್ಲಿ ಕ್ರಮವಾಗಿ ಕಂಠಕ, ಅಂಕುಶ, ಪಾಶ ಮತ್ತು ಪುಸ್ತಕಗಳಿವೆ. ಕಿರೀಟಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕೇಯೂರ, ತೋಳಬಂದಿ, ಕಟಿವಸ್ತ್ರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ. ಕೈಯಲ್ಲಿ ಕಂಠವನ್ನು ಹಿಡಿದುಕೊಂಡಿರುವುದು ವಿಶೇಷ ಲಕ್ಷಣವಾಗಿದೆ. ಹಿಂದೂ ಪರಂಪರೆಯ ಸರಸ್ವತಿಯ ಶಿಲ್ಪಗಳಲ್ಲಿ ಕಂಠಕದ ಬದಲಾಗಿ ಅಕ್ಷಮಾಲಾ ಇರುತ್ತದೆ.

**೩. ನಿಷಿಧಿಗಲ್ಲುಗಳು**

ಜೈನ ಪರಂಪರೆಯಲ್ಲಿ ತಮ್ಮ ಆತ್ಮೀಯರು, ಬಂಧುಗಳು, ಗುರುಗಳು, ಪೂಜ್ಯ ವ್ಯಕ್ತಿಗಳು ತಮ್ಮ ಬದುಕಿನ ಪರಮ ಗುರಿಯಾದ ಸದ್ಗತಿ ಸಂಪಾದನೆಗಾಗಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸಮಾಧಿ ಮರಣವನ್ನಪ್ಪಿದಾಗ ಅವರ ವಿನಯಾರ್ಥವಾಗಿ ಬಸದಿಗಳನ್ನು ನಿರ್ಮಿಸುವುದು, ನಿಷಿಧಿಗಲ್ಲುಗಳನ್ನು ನಿಲ್ಲಿಸುವುದು, ನಿಷಿಧಿ ಮಂಟಪಗಳನ್ನು ಕಟ್ಟಿಸುವುದು, ಶಾಸನಗಳನ್ನು ಹಾಕಿಸುವುದು, ಚತುರ್ದಾನಗಳನ್ನು ಮಾಡುವುದು - ಇಂತಹ ಕ್ರಿಯೆಗಳು ಪ್ರಾಚೀನ ಕಾಲದಿಂದ ಇಂದಿಗೂ ರೂಢಿಯಲ್ಲಿವೆ. ಆಚಾರ್ಯ ಸಮಂತಭದ್ರನ 'ರತ್ನಕರಂಡಕ ಶ್ರಾವಕಾಚಾರ' ಕೃತಿಯಲ್ಲಿ ಜೀವನದಲ್ಲಿ ಅನಿವಾರ್ಯವಾದಂತಹ ಉಪಸರ್ಗಗಳು ಒದಗಿದಾಗ, ಅತಿವೃಷ್ಟಿ-ಅನಾವೃಷ್ಟಿಗಳಿಂದ ಆಹಾರ ದೊರೆಯುವುದು ದುರ್ಲಭವಾದಾಗ, ಸಂಪೂರ್ಣ ಶರೀರವನ್ನು ವ್ಯಾಪಿಸಿ ಪಂಚೇಂದ್ರಿಯಗಳನ್ನು ಕ್ಷೀಣಗೊಳಿಸುವಂತಹ ಮುಪ್ಪು ಪ್ರಾಪ್ತವಾದಾಗ, ಶರೀರದಲ್ಲಿ ಅಸಾಧ್ಯವಾದ ರೋಗ-ರುಜಿನಗಳು ಉತ್ಪನ್ನವಾದಾಗ

ಅವುಗಳನ್ನು ಪ್ರತಿರೋಧಿಸಲು ಆಗದೇ ಇದ್ದ ಸಂದರ್ಭಗಳಲ್ಲಿ ತಾವು ಶ್ರದ್ಧೆಯಿಂದ ಪಾಲಿಸುತ್ತಿರುವ ಪವಿತ್ರ ಧರ್ಮದ ರಕ್ಷಣೆಗಾಗಿ ಸ್ನೇಹ, ವೈರ, ಮಮತೆ, ಪರಿಗ್ರಹಗಳನ್ನು ತ್ಯಜಿಸಿ ಸಕಲ ಜೀವಿಗಳಲ್ಲೂ ಕ್ಷಮೆಯಾಚಿಸಿ ತಮ್ಮ ಧರ್ಮಗುರುಗಳ ಬಳಿ ತಮ್ಮ ಪೂರ್ವ ವೃತ್ತಾಂತಗಳನ್ನೆಲ್ಲ ವಿವರಿಸಿ ಶೋಕ, ಭೀತಿ, ವಿಷಾದ, ಕಲುಷತ್ವ, ಅರತಿ ಮೊದಲಾದವುಗಳನ್ನು ತ್ಯಾಗಮಾಡಿ ಬಲ ಮತ್ತು ಉತ್ಸಾಹಗಳಿಂದ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಕ್ರಮದಿಂದ ಆಹಾರವನ್ನು ಕಡಿಮೆ ಮಾಡುತ್ತ ಪಂಚನಮಸ್ಕಾರ ಮಂತ್ರದಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ ಯಾವುದೇ ಬಗೆಯ ಆಸೆಗಳನ್ನಿಟ್ಟುಕೊಳ್ಳದೆ ದೇಹತ್ಯಾಗ ಮಾಡಿ ಸುಖದ ಸಮುದ್ರವೇ ಆಗಿರುವಂತಹ ಮೋಕ್ಷವನ್ನು ಪಡೆದು ಜೀವನವನ್ನು ಪಾವನಗೊಳಿಸಿಕೊಳ್ಳಬೇಕೆಂದು ಹೇಳಲಾಗಿದೆ.[16] ಹೀಗೆ ಸಮಾಧಿ ಮರಣವನ್ನಪ್ಪಿದವರ ವಿನಯಾರ್ಥವಾಗಿ ನಿಷಿಧಿಗಲ್ಲುಗಳನ್ನು ನಿಲ್ಲಿಸುವ ಮತ್ತು ಬಸದಿಗಳನ್ನು ನಿರ್ಮಿಸುವ ಪರಂಪರೆ ಗೋಕಾಕ ತಾಲೂಕಿನಲ್ಲಿಯೂ ಪ್ರಚಲಿತದಲ್ಲಿತ್ತು.

ಕೊಣ್ಣೂರದ ಶ್ರೀ ಕಾಡಪ್ಪ ವಿರುಪಾಕ್ಷಿ ಶಿಲವಂತ ಅವರ ಮನೆಯ ಆವರಣದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನ ನಿಷಿಧಿಶಾಸನ ಸ್ತಂಭವಿದೆ. ಕೆಂಪು ಮರಳು ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಸ್ತಂಭವು ಚೌಕಾಕಾರವಾಗಿದೆ. ೧೨೫ ಸೆಂ. ಮೀ. ಎತ್ತರ (ಭೂಮಿಯಲ್ಲಿ ಹೂಳಲ್ಪಟ್ಟ ಭಾಗವನ್ನು ಹೊರತುಪಡಿಸಿ) ಮತ್ತು ೨೮ ಸೆಂ. ಮೀ. ಅಗಲವಾಗಿದೆ. ಸ್ತಂಭದ ಒಂದು ಮುಖದಲ್ಲಿ ಎರಡು ಶಿಲ್ಪ ಪಟ್ಟಿಕೆಗಳಿದ್ದು, ಉಳಿದ ಮೂರೂ ಮುಖಗಳಲ್ಲಿ ಒಂದೊಂದು ಶಿಲ್ಪಪಟ್ಟಿಕೆಗಳಿವೆ. ಸ್ತಂಭದ ಎರಡು ಶಿಲ್ಪಪಟ್ಟಿಕೆಗಳಿರುವ ಮುಖದಲ್ಲಿ, ಕೆಳಗಿನ ಪಟ್ಟಿಕೆಯಲ್ಲಿ ಸಲ್ಲೇಖನ ವ್ರತವನ್ನು ಭೋಧಿಸುತ್ತಿರುವ ಮುನಿ ವೀರಾಸನದಲ್ಲಿ ಆಸೀನನಾಗಿದ್ದಾನೆ. ವ್ರತವನ್ನು ಸ್ವೀಕರಿಸುತ್ತಿರುವ ವ್ಯಕ್ತಿಯೂ ವೀರಾಸನದಲ್ಲಿ ಆಸೀನನಾಗಿ ಅಂಜಲಿ ಮುದ್ರೆಯಲ್ಲಿದ್ದಾನೆ. ಇವರಿಬ್ಬರ ಮಧ್ಯದಲ್ಲಿ ಶ್ರುತಪೀಠವಿದೆ. ಸ್ತಂಭದ ನಾಲ್ಕೂ ಮುಖಗಳಿರುವ ಮೇಲಿನ ಪಟ್ಟಿಕೆಗಳಲ್ಲಿ ಕಾಯೋತ್ಸರ್ಗದಲ್ಲಿರುವ ತೀರ್ಥಂಕರನ ಶಿಲ್ಪ ಮತ್ತು ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸಮಾಧಿ ಮರಣವನ್ನಪ್ಪಿ ಮೋಕ್ಷವನ್ನು ಪಡೆದಿರುವ ವ್ಯಕ್ತಿಯನ್ನು ಪ್ರತಿನಿಧಿಸುವ ವ್ಯಕ್ತಿ, ಸೂರ್ಯ-ಚಂದ್ರನ ನಿರೂಪಣೆಗಳಿವೆ. ಸ್ತಂಭದ ಮೇಲ್ತುದಿಯನ್ನು ಶಿಖರದ ರೂಪದಲ್ಲಿ ತೋರಿಸಲಾಗಿದೆ. ಈ ಸ್ತಂಭದ ನಾಲ್ಕೂ ಮುಖಗಳಲ್ಲಿ ಶಾಸನವಿದೆ. ಅಕ್ಷರಗಳು ತ್ರುಟಿತವಾಗಿರುವುದರಿಂದ ವಿವರಗಳು ಅಸ್ಪಷ್ಟವಾಗಿವೆ.

### ೪. ಜೈನ ವೀರಗಲ್ಲುಗಳು

ಜೈನ ಧರ್ಮವು ಅಹಿಂಸಾ ಸಿದ್ಧಾಂತಕ್ಕೆ ಪ್ರಥಮ ಪ್ರಾಶಸ್ತ್ಯ ಕೊಟ್ಟಿದೆ. 'ಅಹಿಂಸಾ ಪರಮೋ ಧರ್ಮಃ' ಎಂಬುದು ಇದರ ಧ್ಯೇಯವಾಕ್ಯವಾಗಿದೆ. ಈ ಧರ್ಮವು ಎಲ್ಲ ಬಗೆಯ ಜನರನ್ನೂ (ಅರಸರು, ವೀರರು, ವರ್ತಕರು, ಕೃಷಿಕರು, ಕುಶಲಕರ್ಮಿಗಳು ಇತ್ಯಾದಿ) ಗಮನದಲ್ಲಿಟ್ಟುಕೊಂಡು ಹಿಂಸೆಯನ್ನು ದ್ರವ್ಯಹಿಂಸೆ, ಭಾವಹಿಂಸೆ, ಸಂಕಲ್ಪಹಿಂಸೆ, ಉದ್ಯೋಗ ಹಿಂಸೆ, ಆರಂಭ ಹಿಂಸೆ, ವಿರೋಧ ಹಿಂಸೆ ಎಂದಿತ್ಯಾದಿ ನಿರೂಪಿಸಿದೆ. ಅಸಾವಧಾನ ಚಿತ್ತವೃತ್ತಿಯಿಂದ ಕೆಲವೊಮ್ಮೆ ಹಿಂಸೆ ಸಂಭವಿಸುವುದು ದ್ರವ್ಯ ಹಿಂಸೆಯಾಗಿದೆ. ಅಜಾಗರೂಕತೆಯ ಚಿತ್ತವೃತ್ತಿಯಿಂದ ಜರುಗುವ ಹಿಂಸೆಯು ಭಾವಹಿಂಸೆಯಾಗಿದೆ. ತಿಳಿದೂ-ತಿಳಿದೂ ನಿರಪರಾಧಿಗಳನ್ನು ನೋವಿಸುವುದು ಮತ್ತು ಕೊಲ್ಲುವುದು ಸಂಕಲ್ಪ ಹಿಂಸೆಯಾಗಿದೆ. ಜೀವನೋಪಾಯದ ವೃತ್ತಿಗಳ ಸಂದರ್ಭಗಳಲ್ಲಿ ಜರುಗುವ ಅನಿವಾರ್ಯ

ಹಿಂಸೆಯು ಉದ್ಯೋಗ ಹಿಂಸೆಯಾಗಿದೆ. ಜಾಗರೂಕನಾಗಿದ್ದರೂ ಭೋಜನ ಮೊದಲಾದ ದೈನಂದಿನ ಚಟುವಟಿಕೆಗಳ ಸಂದರ್ಭದಲ್ಲಿ ಜರುಗುವ ಹಿಂಸೆಯು ಆರಂಭ ಹಿಂಸೆಯಾಗಿದೆ. ತನ್ನ ಮತ್ತು ಪರರ ರಕ್ಷಣೆಯ ಸಂದರ್ಭದಲ್ಲಿ ಅನಿವಾರ್ಯವಾಗಿ ಜರುಗುವ ಹಿಂಸೆಯು ವಿರೋಧಿ ಹಿಂಸೆಯಾಗಿದೆ. ಈ ಎಲ್ಲ ಸವಲತ್ತುಗಳ ಹಿಂದೆ 'ಅನಿವಾರ್ಯತೆ'ಯ ಕಡ್ಡಾಯವನ್ನಿರಿಸಿಕೊಂಡಿರುವುದು ವಿಶೇಷತೆಯಾಗಿದೆ.[17]

ತನ್ನ ಮತ್ತು ತನ್ನ ಧರ್ಮ, ರಾಷ್ಟ್ರ, ನಾಡು, ಗ್ರಾಮದ ಮೇಲೆ ವೈರಿಗಳು ಆಕ್ರಮಣವೆಸಗಿ ಹಿಂಸೆಯಲ್ಲಿ ತೊಡಗಿದಾಗ ಅವರನ್ನು ಎದುರಿಸದೇ ದೂರವಿದ್ದರೆ ಅದು ನ್ಯಾಯದ ಕೊಲೆಗೆ ಸಮ್ಮತಿಯಿತ್ತಂತೆ ಎಂಬುದು ಜೈನ ಧರ್ಮದ ಪ್ರತಿಪಾದನೆಯಾಗಿದೆ. ಹೀಗೆ ಯುದ್ಧವನ್ನು ಒಂದು ವೃತ್ತಿಯಾಗಿ ಕೆಲವು ನಿರ್ಬಂಧಗಳೊಡನೆ ಒಪ್ಪಿಕೊಳ್ಳುವ ಜೈನ ಧರ್ಮವು ವ್ಯಾವಹಾರಿಕ ಕಾರಣಗಳಿಗಾಗಿ ವಿರೋಧಿ ಹಿಂಸೆಯಲ್ಲಿ ತೊಡಗುವುದರಿಂದ ಹಿಂಸೆಯನ್ನು ಮಾಡಿದಂತಾಗುವುದಿಲ್ಲ. ಬದಲಾಗಿ ಇದೊಂದು ಆತನ ಕರ್ತವ್ಯವೆಂದು ಸೂಚಿಸಿದೆ. ಆದರೂ ಅಂತಹ ಯುದ್ಧಗಳಲ್ಲಿ ಆ ವ್ಯಕ್ತಿ ಆದಷ್ಟು ಎಚ್ಚರದಿಂದ ಇರಬೇಕೆಂದೂ ಸಂಯಮವನ್ನು ತೋರಬೇಕೆಂದೂ ಎಷ್ಟು ಸಾಧ್ಯವೋ ಅಷ್ಟು ಸೌಮ್ಯವಾಗಿ ವರ್ತಿಸಬೇಕೆಂದೂ ಲೌಕಿಕ ವಿಜಯಕ್ಕಿಂತ ಧರ್ಮ ವಿಜಯಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಬೇಕೆಂದೂ ಎಚ್ಚರಿಸಿದೆ. ಆದ್ದರಿಂದಲೇ ವೀರನೊಬ್ಬನು ತನ್ನ ವೃತ್ತಿಯನ್ನು ಅವಲಂಬಿಸಿಯೂ ತನ್ನ ಮತಧರ್ಮವನ್ನು ಅನುಸರಿಸುವುದು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ಕನ್ನಡ ನಾಡನ್ನಾಳಿದ ಬಹುತೇಕ ಅರಸು ಮನೆತನಗಳು ಜೈನ ಧರ್ಮದ ಅಹಿಂಸಾ ಸಿದ್ಧಾಂತದ ಪ್ರಭಾವಕ್ಕೊಳಗಾಗಿ ಇದರ ನಿಷ್ಠಾವಂತ ಅನುಯಾಯಿಗಳಾಗಿದ್ದವು. ಅನೇಕ ಜೈನ ಧರ್ಮೀಯರು ಆ ಮನೆತನಗಳ ರಾಜಕೀಯ ಚಟುವಟಿಕೆಗಳು ಮತ್ತು ಸೈನ್ಯಾಡಳಿತದಲ್ಲಿ ಸೇರ್ಪಡೆಯಾಗಿ ನಾಡಿನ ಸಂರಕ್ಷಣೆಗಾಗಿ ವೈರಿಗಳನ್ನು ಎದುರಿಸಿ ವೀರಮರಣ ಹೊಂದಿದ್ದಾರೆ. ಅವರಲ್ಲಿ ಕೆಲವರು ಪ್ರಾಯಶ್ಚಿತ ರೂಪವಾಗಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸಮಾಧಿಮರಣ ಹೊಂದಿದ್ದಾರೆ. ಅಂತಹ ವಿವಿಧ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದ ಅನೇಕ ಜೈನ ವೀರರ (ಮಾರಸಿಂಹ, ಚಾವುಂಡರಾಯ, ಶಂಕರಗಂಡ, ನಾಗದೇವ, ಪಡೆವಳ ತೈಲ, ಗಂಗರಾಜ, ಬೈಚಪ್ಪ, ತಮ್ಮಣ್ಣ ನಾಯಕ ಇತ್ಯಾದಿ) ವಿವರಗಳು ಸಮಕಾಲೀನ ಶಾಸನಗಳು ಮತ್ತು ಸಾಹಿತ್ಯಿಕ ಆಕರಗಳಲ್ಲಿ ದೊರೆಯುತ್ತವೆ. ಹಾಗೆಯೇ ಯುದ್ಧಗಳಲ್ಲಿ ಭಾಗವಹಿಸಿ ವೀರಮರಣವನ್ನಪ್ಪಿದ ವೀರರ ವಿನಯಾರ್ಥವಾಗಿ ನಿಲ್ಲಿಸಿದ ಕೆಲವು ಜೈನ ವೀರಗಲ್ಲುಗಳು ನಾಡಿನಾದ್ಯಂತ (ಉತ್ತರ ಕನ್ನಡ ಜಿಲ್ಲೆಯ ಕಾಯ್ಕಿಣಿ, ಭಟ್ಕಳ, ಹಾಡುವಳ್ಳಿ, ಹಾಸನ ಜಿಲ್ಲೆಯ ಶ್ರವಣಬೆಳಗೊಳ, ಶಿವಮೊಗ್ಗ ಜಿಲ್ಲೆಯ ಉದ್ರಿ, ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲ್ಲೂಕಿನ ಹಿರೇಹಟ್ಟಿಹೊಳಿ ಇತ್ಯಾದಿ) ಗೋಚರಿಸುತ್ತವೆ.[18]

ಕೊಣ್ಣೂರದ ಹನುಮಾನ ದೇವಾಲಯದ ಮುಂಭಾಗದಲ್ಲಿ ಕ್ರಿ. ಶ. ಸುಮಾರು ೧೨ನೆಯ ಶತಮಾನದ ಜೈನ ವೀರಗಲ್ಲುವಿದೆ. ಕೆಂಪು ಮರಳು ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ವೀರಗಲ್ಲವು ೮೦ ಸೆಂ. ಮೀ. ಎತ್ತರ ಮತ್ತು ೩೦ ಸೆಂ. ಮೀ. ಅಗಲವಾಗಿದೆ. ಈ ವೀರಗಲ್ಲವು ಮೂರು ಶಿಲ್ಪಪಟ್ಟಿಕೆಗಳಿಂದ ಕೂಡಿದೆ. ಒಂದನೆಯ ಪಟ್ಟಿಕೆಯಲ್ಲಿ ವೀರ ಮತ್ತು ವೈರಿಗಳ ಮಧ್ಯದಲ್ಲಿ ಪರಸ್ಪರ ಹೋರಾಟದ ದೃಶ್ಯವಿದೆ. ಎರಡನೆಯ ಪಟ್ಟಿಕೆಯಲ್ಲಿ ಆ ಹೋರಾಟದಲ್ಲಿ ವೀರಮರಣವನ್ನಪ್ಪಿದ ವೀರನನ್ನು ದೇವಲೋಕದ ಅಪ್ಸರೆಯರು ಕಂಠಾಶ್ಲೇಷ ಭಂಗಿಯಲ್ಲಿ ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೆಯ ಪಟ್ಟಿಕೆಯಲ್ಲಿ ವೀರನು ತೀರ್ಥಂಕರ ಮತ್ತು ಮುನಿಯ ಸನ್ನಿಧಿಯಲ್ಲಿ ಅಂಜಲಿಮುದ್ರಾಸಕ್ತನಾಗಿ ಆಸೀನನಾಗಿರುವ ದೃಶ್ಯವಿದೆ. ಶಿಲೆಯ ತುದಿಯಲ್ಲಿ ಸೂರ್ಯ ಮತ್ತು ಚಂದ್ರನ ನಿರೂಪಣೆಗಳಿವೆ.

## ಅಡಿಟಿಪ್ಪಣಿಗಳು

1. ಹಂಜೆ ಅಪ್ಪಣ್ಣ ಎನ್., "ಜೈನ ಶಿಲ್ಪಗಳು : ಹಿನ್ನೆಲೆ ಮತ್ತು ಲಕ್ಷಣಗಳು", ರತ್ನಕರಂಡಕ (ಡಾ. ಎಚ್. ಎ. ಪಾರ್ಶ್ವನಾಥ ಅಭಿನಂದನ ಗ್ರಂಥ-೨೦೦೭), ಪು. ೩೨೬-೩೪೬.
2. ಅದೇ.
3. ಅದೇ.
4. ಅದೇ.
5. ಅದೇ.
6. ಅದೇ.
7. ಅದೇ.
8. ಅದೇ.
9. ಅದೇ.
10. ಅದೇ.
11. ಅದೇ.
12. ಹಂಜೆ ಅಪ್ಪಣ್ಣ ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ (೨೦೦೮), ಪು. ೭೧.
13. ಹಂಜೆ ಅಪ್ಪಣ್ಣ ಎನ್., "ಜೈನ ಶಿಲ್ಪಗಳು : ಹಿನ್ನೆಲೆ ಮತ್ತು ಲಕ್ಷಣಗಳು", ಪೂರ್ವೋಕ್ತ.
14. ಅದೇ.
15. ಹಂಜೆ ಅಪ್ಪಣ್ಣ ಎನ್., ಧಾರವಾಡ ಪರಿಸರದಲ್ಲಿ ಜೈನಧರ್ಮ (೨೦೦೮), ಪು. ೮೩-೮೫.
16. ಮಿರ್ಜಿ ಅಣ್ಣಾರಾಯ (ಅನು.), ಸಮಂತಭದ್ರರ ರತ್ನಕರಂಡಕ-ಶ್ರಾವಕಾಚಾರ (೧೯೯೨), ಪು. ೫೧೬-೫೫೭.
17. ಮಿರ್ಜಿ ಅಣ್ಣಾರಾಯ, ಜೈನಧರ್ಮ (ತೃತೀಯ ಮುದ್ರಣ-೧೯೯೭), ಪು. ೨೩೩-೨೩೯.
18. ಚಿದಾನಂದಮೂರ್ತಿ ಎಂ., "ಕರ್ನಾಟಕದ ಜೈನ ಧರ್ಮದಲ್ಲಿ ಯುದ್ಧ ಮತ್ತು ಅಹಿಂಸೆಗಳ ಪರಿಕಲ್ಪನೆ", ಹೊಸತು ಹೊಸತು (೧೯೯೮), ಪು. ೧೩೦-೧೪೧.



## ಅಧ್ಯಾಯ : ಆರು

# ಸಮಾರೋಪ

ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸವನ್ನು ಪುನಾರಚಿಸಲು ಜೈನ ಧರ್ಮದ ಕೊಡುಗೆ ಅಪಾರವಾಗಿದೆ. ಈ ಧರ್ಮವು ಕನ್ನಡ ನಾಡನ್ನಾಳಿದ ಪ್ರಧಾನ ಅರಸು ಮನೆತನಗಳು ಮತ್ತು ಪ್ರಾದೇಶಿಕವಾಗಿ ಆಳ್ವಿಕೆ ಮಾಡಿದ ಮಹಾಮಂಡಳೇಶ್ವರ, ಮಹಾಸಾಮಂತ, ಪ್ರಭುಗಾವುಂಡ, ಗಾವುಂಡ ಮನೆತನಗಳನ್ನೂ ತನ್ನ ತತ್ವ-ಸಿದ್ಧಾಂತಗಳೆಡೆಗೆ ಆಕರ್ಷಿಸಿದೆ. ಆ ಮನೆತನಗಳ ಅರಸರೆಲ್ಲರೂ ಜೈನ ಮುನಿಗಳು, ಆರ್ಯಿಕೆಯರು, ಭಟ್ಟಾರಕರು, ಕವಿಗಳಿಗೆ ಆಶ್ರಯ ನೀಡಿ ಪ್ರೋತ್ಸಾಹಿಸಿದ್ದಾರೆ. ಜೊತೆಗೆ ಬಸದಿಗಳ ನಿರ್ಮಾಣ, ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಷ್ಠಾಪನೆ ಮತ್ತು ಸಾಹಿತ್ಯ ರಚನೆಗೆ ಉದಾರವಾಗಿ ದಾನ-ದತ್ತಿಗಳನ್ನು ಕೊಡಮಾಡಿ ಜೈನ ಧರ್ಮದ ಸಾಂಸ್ಕೃತಿಕ ವಲಯವನ್ನು ಶ್ರೀಮಂತವಾಗಿಸಿದ್ದಾರೆ. ಹಾಗಾಗಿಯೇ ಈ ನಾಡಿನ ಪ್ರತಿ ಗ್ರಾಮದಲ್ಲೂ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಏನಾದರೊಂದು ಅವಶೇಷ ದೊರೆಯುತ್ತದೆ. ಹೀಗಾಗಿ ಕನ್ನಡ ನಾಡಿನಲ್ಲಿ ಜೈನ ಧರ್ಮದ ಸಾಂಸ್ಕೃತಿಕ ಇತಿಹಾಸದ ವಸ್ತುನಿಷ್ಠ ಸಮಗ್ರ ಅಧ್ಯಯನಕ್ಕೆ ಪ್ರಾದೇಶಿಕ ಜೈನ ಬಸದಿಗಳು, ಶಿಲ್ಪಗಳು, ಶಾಸನಗಳು ಮೊದಲಾದ ಆಕರಗಳ ಪಾತ್ರವೂ ಮುಖ್ಯವೆನಿಸುತ್ತದೆ. ಪ್ರಾದೇಶಿಕವಾಗಿ ದೊರೆಯುವ ಜೈನ ಮೂಲಾಧಾರಗಳನ್ನು ಮರೆತು ಜೈನ ಧರ್ಮದ ಇತಿಹಾಸವನ್ನು ರಚಿಸಲು ಪ್ರಾರಂಭಿಸಿದರೆ ಆ ಇತಿಹಾಸವು ರೂಪುಗೊಳ್ಳುವ ಒಂದು ಪ್ರಧಾನ ನೆಲೆಯನ್ನೇ ಮರೆತಂತಾಗುತ್ತದೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಜೈನ ಶಾಸನಗಳು, ಬಸದಿಗಳು, ಶಿಲ್ಪಗಳು ಮೊದಲಾದವುಗಳ ಮಾಹಿತಿಗಳನ್ನು ಒಂದೆಡೆಗೆ ಸಂಗ್ರಹಿಸಿ ಪ್ರಸ್ತುತ ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದಲ್ಲಿ ಕೆಲವು ಮಹತ್ವದ ಹೊಸ ಹೊಸ ವೈವಿಧ್ಯಮಯವಾದ ವಿಚಾರಗಳು ಸ್ಪಷ್ಟವಾಗಿವೆ.

ಗೋಕಾಕ ತಾಲೂಕಿನಲ್ಲಿ ಪ್ರಚಲಿತದಲ್ಲಿರುವ ಪೌರಾಣಿಕ ಐತಿಹ್ಯದ ಪ್ರಕಾರ ಜೈನ ಧರ್ಮದ ಪ್ರಾಚೀನತೆಯು ಕ್ರಿ. ಪೂ. ಸುಮಾರು ೪ನೆಯ ಶತಮಾನದಷ್ಟು ಹಿಂದಕ್ಕೊಗುತ್ತದೆ. ೨೪ನೆಯ ತೀರ್ಥಂಕರ ಮಹಾವೀರನ ತರುವಾಯ ಧರ್ಮ ಪ್ರಸಾರದಲ್ಲಿ ತೊಡಗಿದ ಗಣಧರರು, ಕೇವಲಿಗಳು, ಶ್ರುತಕೇವಲಿಗಳು ಮೊದಲಾದವರು ಪ್ರಮುಖರಾಗಿದ್ದಾರೆ. ಅವರಲ್ಲಿ ಅಂತಿಮ ಶ್ರುತಕೇವಲಿ ಭದ್ರಬಾಹು ಭಟ್ಟಾರಕರಿಗೆ ಈ ನಾಡಿನ ಚಾರಿತ್ರಿಕ ಸಂದರ್ಭದಲ್ಲಿ ವಿಶೇಷವಾದ ಸ್ಥಾನವಿದೆ. ಈ ಭಟ್ಟಾರಕರು ತಮ್ಮ ಪ್ರಧಾನ ಶಿಷ್ಯ ನಂದ ಮನೆತನದ ಚಂದ್ರಗುಪ್ತನ ನೇತೃತ್ವದಲ್ಲಿ ಹನ್ನೆರಡು ಸಾವಿರ ಮುನಿಗಳೊಂದಿಗೆ ಉತ್ತರಾಪಥದಿಂದ ದಕ್ಷಿಣಾಪಥದ ಶ್ರವಣಬೆಳಗೊಳಕ್ಕೆ ವಿಹಾರ ಬೆಳೆಸಿದ್ದ ಸಂದರ್ಭದಲ್ಲಿ ಗೋಕಾಕ ತಾಲೂಕಿನ ಕೊಣ್ಣೂರದ ಪರಿಸರದಲ್ಲಿರುವ ಶಿಲೆಯ ಗುಂಫಾಗಳಲ್ಲಿ (ಏಕಾಂತ ವಾಸಸ್ಥಳಗಳು) ತಂಗಿದ್ದರೆಂದು ಪ್ರತೀತಿಯಿದೆ. ಈ ಗುಂಫಾಗಳು ವಾಸ್ತವವಾಗಿ ಬೃಹತ್‌ಶಿಲಾಯುಗ ಸಂಸ್ಕೃತಿಯ ಕಿಂಡಿಕೋಣೆ ಶಿಲಾಗೋರಿಗಳಾಗಿವೆ. ಪ್ರಾಯಶಃ ಚಿಕ್ಕ ಚಿಕ್ಕ ಕೋಣೆಗಳಂತಿರುವ ಈ ಗೋರಿಗಳನ್ನು ಅಂದಿನ ಮುನಿಗಳು ಏಕಾಂತ ಸ್ಥಳದಲ್ಲಿ ತಪಸ್ಸು ಮಾಡಲು ಗುಂಫಾಗಳನ್ನಾಗಿ ಬಳಸಿಕೊಂಡಂತೆ

ತೋರುತ್ತದೆ. ಹಾಗಾಗಿಯೇ ಬೆಳಗಾವಿ ಜಿಲ್ಲೆಯ ಕೆಲವು ಜೈನ ಕೇಂದ್ರಗಳಲ್ಲಿ ಕೊಣ್ಣೂರ ಗ್ರಾಮಕ್ಕೆ ಪ್ರಾಚೀನ ಕಾಲದಿಂದಲೂ ಮಹತ್ವವಾದ ಸ್ಥಾನವಿದೆ. ಅರ್ವಾಚೀನ ಕಾಲದ ಅನೇಕ ಮುನಿಗಳು ಕೊಣ್ಣೂರ ಗ್ರಾಮವನ್ನು ತಮ್ಮ ದೀಕ್ಷೆ, ತಪಸ್ಸು, ಚಾತುರ್ಮಾಸ, ನಿರ್ವಾಣ ಮೊದಲಾದ ಚಟುವಟಿಕೆಗಳಿಗೆ ಆಯ್ಕೆ ಮಾಡಿಕೊಂಡಿದ್ದಾರೆ. ೧೯ನೆಯ ಶತಮಾನದ ಪ್ರಥಮಾಚಾರ್ಯ ಮಹಾಮುನಿ ಚಾರಿತ್ರ ಚಕ್ರವರ್ತಿ ಆಚಾರ್ಯ ೧೦೮ ಶ್ರೀ ಶಾಂತಿಸಾಗರಮುನಿ ಮಹಾರಾಜರು ಕೊಣ್ಣೂರದಲ್ಲಿ ತಪ್ಪಸ್ಸು ಕೈಗೊಂಡು ಹಲವು ಪವಾಡ ಸದೃಶ್ಯಗಳನ್ನು ಮೆರೆದಿದ್ದಾರೆ. ಆಚಾರ್ಯ ೧೦೮ ಶ್ರೀ ಸುಬಲಸಾಗರಮುನಿ ಮಹಾರಾಜರ ಸಹೋದರ ಮತ್ತು ಶಿಷ್ಯ ಶ್ರೀ ಧರಸೇನಮುನಿ ಮಹಾರಾಜರು ಈ ಗ್ರಾಮದಲ್ಲಿಯೇ ಸಮಾಧಿಮರಣ ಹೊಂದಿದ್ದಾರೆ. ಈ ಎಲ್ಲ ಸಂಗತಿಗಳಿಂದ ಕೊಣ್ಣೂರ ಗ್ರಾಮವು ಅತೀ ಪ್ರಾಚೀನ ಕಾಲದಿಂದಲೂ ಪ್ರಸಿದ್ಧ ಜೈನ ಕೇಂದ್ರವಾಗಿ, ಆ ಸ್ಥಾನವನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದು ಸ್ಪಷ್ಟವಾಗುತ್ತದೆ.

ಕನ್ನಡ ನಾಡನ್ನಾಳಿದ ಪ್ರತಿಯೊಂದು ಅರಸು ಮನೆತನಗಳೂ ಜೈನ ಧರ್ಮಕ್ಕೆ ಒಂದಿಲ್ಲೊಂದು ರೀತಿಯಲ್ಲಿ ರಾಜಾಶ್ರಯ ನೀಡಿವೆ. ಆ ನಿಟ್ಟಿನಲ್ಲಿ ಗೋಕಾಕ ಪರಿಸರದಲ್ಲಿ ಆಳ್ವಿಕೆ ಕೈಗೊಂಡಿದ್ದ ಮತ್ತು ತಮ್ಮ ಆಳ್ವಿಕೆಯ ಪ್ರಭಾವನ್ನು ಹೊಂದಿದ್ದ ಅರಸು ಮನೆತನಗಳೂ ಜೈನ ಧರ್ಮದ ಪ್ರಭಾವಕ್ಕೊಳಗಾಗಿ ಇದಕ್ಕೆ ರಾಜಾಶ್ರಯ ನೀಡಿ, ಈ ಧರ್ಮದ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಉದಾರವಾಗಿ ಪ್ರೋತ್ಸಾಹಿಸಿವೆ. ಈ ಪ್ರದೇಶವು ಬನವಾಸಿ ಕದಂಬರು, ಶಾತವಾಹನರು ಮತ್ತು ಬಾದಾಮಿ ಚಲುಕ್ಯರ ಆಳ್ವಿಕೆಯ ಪ್ರಭಾವದಲ್ಲಿತ್ತೆಂಬ ವಿಚಾರ ಈ ತಾಲೂಕಿನ ಸುತ್ತಮುತ್ತಲಿನ ಪರಿಸರದಲ್ಲಿರುವ ಸಮಕಾಲೀನ ಅವಶೇಷಗಳಿಂದ ಪರೋಕ್ಷವಾಗಿ ದೃಢಪಡುತ್ತದೆ. ಆದರೆ ಆ ಮೂರೂ ಅರಸು ಮನೆತನಗಳು ಗೋಕಾಕ ತಾಲೂಕಿನಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಕೈಗೊಂಡಿರಬಹುದಾದ ಯಾವುದೇ ಆಧಾರಗಳು ಇದುವರೆಗೆ ಬೆಳಕಿಗೆ ಬಂದಿಲ್ಲ. ಮಳಖೇಡದ ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಸವದತ್ತಿ ರಟ್ಟರು, ಹಗರಟೆಗೆ ನಾಡಿನ ಯದುವಂಶದ ಪ್ರಭುಗಳು ಹಾಗೂ ಈ ಮನೆತನಗಳ ಆಡಳಿತಾಧಿಕಾರಿಗಳು ಗೋಕಾಕ ತಾಲೂಕಿನ ಕುಲಗೋಡ, ಕಲ್ಲೊಳೆ, ಕೊಣ್ಣೂರ, ಕುಂದರಗಿ, ಗೋಕಾಕ, ಯಾದವಾಡ ಮೊದಲಾದ ಗ್ರಾಮಗಳಲ್ಲಿ ಬಸದಿಗಳ ನಿರ್ಮಾಣ, ಜೀರ್ಣೋದ್ಧಾರ, ಶಿಲ್ಪಗಳ ಪ್ರತಿಷ್ಠಾಪನೆ, ಬಸದಿಗಳು ಮತ್ತು ಮುನಿಗಳಿಗೆ ದಾನ-ದತ್ತಿಗಳು ಮೊದಲಾದ ಚಟುವಟಿಕೆಗಳನ್ನು ಕೈಗೊಂಡಿದ್ದಾರೆ. ಆ ಚಟುವಟಿಕೆಗಳ ಕುರುಹುಗಳು ಇಂದಿಗೂ ಈ ಗ್ರಾಮಗಳಲ್ಲಿ ಉಳಿದು ಬಂದಿವೆ. ಕ್ರಿ. ಶ. ಸುಮಾರು ೧೫ನೆಯ ಶತಮಾನದಿಂದ ೧೯ನೆಯ ಶತಮಾನದವರೆಗಿನ ಕಾಲಾವಧಿಯಲ್ಲಿ ಈ ತಾಲೂಕಿನಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಲಭ್ಯವಾಗಿಲ್ಲ. ೧೯ನೆಯ ಶತಮಾನದ ಉತ್ತರಾರ್ಧದಿಂದೀಚೆಗೆ ಚಾರಿತ್ರ ಚಕ್ರವರ್ತಿ ಆಚಾರ್ಯ ೧೦೮ ಶ್ರೀ ಶಾಂತಿಸಾಗರಮುನಿ ಮಹಾರಾಜರು, ಸ್ಯಾದ್ವಾದಕೇಸರಿ ಆಚಾರ್ಯ ೧೦೮ ಶ್ರೀ ಪಾಯಸಾಗರಮುನಿ ಮಹಾರಾಜರು, ಆಚಾರ್ಯ ೧೦೮ ಶ್ರೀ ಸುಬಲಸಾಗರಮುನಿ ಮಹಾರಾಜರು ಮೊದಲಾದ ಮುನಿಗಳು, ಭಟ್ಟಾರಕರು, ಜೈನ ಸಂಘ-ಸಂಸ್ಥೆಗಳು, ಶ್ರಾವಕರು ಜೈನ ಧರ್ಮಕ್ಕೆ ಮತ್ತೆ ಪುನಶ್ಚೇತನ ಕಲ್ಪಿಸಿ ಪೋಷಿಸುತ್ತ ಮುನ್ನಡೆಸಿದ್ದಾರೆ.

ಗೋಕಾಕ ತಾಲೂಕಿನಲ್ಲಿ ಈ ವರೆಗೆ ಒಟ್ಟು ಒಂಭತ್ತು ಜೈನ ಶಾಸನಗಳು ಬೆಳಕಿಗೆ ಬಂದಿವೆ. ಈ ಎಲ್ಲ ಶಾಸನಗಳು ಈ ತಾಲೂಕಿನ ಪ್ರಾಚೀನ ರಾಜಕೀಯ ಸ್ವರೂಪ, ಆಡಳಿತ ವಿಭಾಗಗಳು, ಆಡಳಿತಾಧಿಕಾರಿಗಳು, ಮುನಿಗಳು ಮತ್ತು ಭಟ್ಟಾರಕ ಪರಂಪರೆ, ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ, ಶಾಸನ ಸಾಹಿತ್ಯ, ಕವಿಗಳು

ಮತ್ತು ವಿದ್ವಾಂಸರು, ಸ್ಥಳನಾಮಗಳು ಮೊದಲಾದ ಸಂಗತಿಗಳ ಅಧ್ಯಯನಕ್ಕೆ ಅಪರೂಪದ ಆಕರಗಳಾಗಿವೆ. ಗೋಕಾಕದ ಕ್ರಿ. ಶ. ಸುಮಾರು ೬ನೆಯ ಶತಮಾನದ ತಾಮ್ರಪಟ ಶಾಸನವು ರಾಷ್ಟ್ರಕೂಟ ಮನೆತನದ ಪ್ರಾರಂಭದ ರಾಜಕೀಯ ಅಧ್ಯಯನಕ್ಕೆ ಕನ್ನಡ ನಾಡಿನಲ್ಲಿ ಲಭ್ಯವಿರುವ ಬೆರಳೆಣಿಕೆಯಷ್ಟು ಶಾಸನಗಳಲ್ಲಿ ಅಪರೂಪದ್ದು. ಕೊಣ್ಣೂರದ ಕ್ರಿ. ಶ. ೧೦೮೭ರ ಶಾಸನವು ಕಲ್ಯಾಣದ ಚಾಳುಕ್ಯ ಮನೆತನದ ಯುವರಾಜರ ರಾಜಕೀಯ ಅಧ್ಯಯನಕ್ಕೆ ಮಹತ್ವದ ಆಕರವಾಗಿದೆ. ಕಲ್ಲೊಳೆಯ ಕ್ರಿ. ಶ. ೧೨೦೮ರ ಶಾಸನವು ಸವದತ್ತಿ ರಟ್ಟರು ಮತ್ತು ಹಗರಟಗೆ ನಾಡಿನಲ್ಲಿ ಆಳ್ವಿಕೆ ಕೈಗೊಂಡಿದ್ದ ಯದುವಂಶದ ಪ್ರಭುಗಳ ಮಧ್ಯದಲ್ಲಿ ಜರುಗಿದ ವೈವಾಹಿಕ ಸಂಬಂಧಕ್ಕೆ ಏಕೈಕ ಆಕರವಾಗಿದೆ. ಜೊತೆಗೆ ಈ ಶಾಸನವು ಹಗರಟಗೆ ನಾಡಿನ ರಾಜಕೀಯ ಇತಿಹಾಸವನ್ನು ನಿರೂಪಿಸಲು ಪೂರಕ ಆಕರ ಸಾಮಗ್ರಿಯಾಗಿದೆ.

ಗೋಕಾಕ ತಾಲೂಕಿನಲ್ಲಿ ಕ್ರಿ. ಶ. ಸುಮಾರು ೬ನೆಯ ಶತಮಾನದಿಂದ ಇಂದಿನವರೆಗೂ ಬಸದಿಗಳ ನಿರ್ಮಾಣ ಪರಂಪರೆ ಅವಿಚ್ಛಿನ್ನವಾಗಿ ಬೆಳೆದು ಬಂದಿದೆ. ಈ ತಾಲೂಕಿನ ಗೋಕಾಕದಲ್ಲಿ ಎರಡು, ಕೊಣ್ಣೂರದಲ್ಲಿ ಒಂದು, ಕಲ್ಲೊಳೆಯಲ್ಲಿ ಒಂದು, ಕಲ್ಲೊಳೆಯ ಸುತ್ತಮುತ್ತಲಿನ ಪರಿಸರದ ಯಾವುದೋ ಗ್ರಾಮದಲ್ಲಿ ಒಂದು, ಯಾದವಾಡದಲ್ಲಿ ಒಂದು, ಕುಂದರಗಿಯಲ್ಲಿ ಒಂದು, ಕುಲಗೋಡದಲ್ಲಿ ಒಂದು - ಹೀಗೆ ಎಂಟು ಪ್ರಾಚೀನ ಬಸದಿಗಳು ಗೋಚರಿಸುತ್ತವೆ. ಇವುಗಳಲ್ಲಿ ಕೊಣ್ಣೂರ ಮತ್ತು ಕಲ್ಲೊಳೆಯ ಬಸದಿಗಳು ಮಾತ್ರ ಮೂಲ ವಾಸ್ತು ಸ್ವರೂಪದಲ್ಲಿ ಉಳಿದು ಬಂದಿವೆ. ಉಳಿದವುಗಳಲ್ಲಿ ಯಾದವಾಡದ ಬಸದಿಯು ಯಾವುದೋ ಒಂದು ಕಾಲಘಟ್ಟದಲ್ಲಿ ಶೈವ ಧರ್ಮದ ಕಾಶೀ ಈಶ್ವರಲಿಂಗ ದೇವಾಲಯವಾಗಿ ಪರಿವರ್ತಿತವಾಗಿದೆ. ಗೋಕಾಕದ ಒಂದು ಬಸದಿ ಮತ್ತು ಕುಲಗೋಡದ ಬಸದಿಗಳು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗುತ್ತ ಸಂಪೂರ್ಣ ನೂತನ ಸ್ವರೂಪವನ್ನು ಪಡೆದಿವೆ. ಕಲ್ಲೊಳೆಯ ಸುತ್ತಮುತ್ತಲಿನ ಪರಿಸರದ ಯಾವುದೋ ಗ್ರಾಮದಲ್ಲಿದ್ದ ಪಂಚಕೂಟ ಬಸದಿ, ಗೋಕಾಕದ ಶಾಂತಿನಾಥ ಬಸದಿ ಮತ್ತು ಕುಂದರಗಿಯ ಬಸದಿಗಳು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿವೆ. ಕಲ್ಲೊಳೆಯಲ್ಲಿ ತ್ರಿರತ್ನತ್ರಯಗಳ (ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ, ಸಮ್ಯಗ್ ಚಾರಿತ್ರ್ಯ) ಪರಿಕಲ್ಪನೆಯಲ್ಲಿ ನಿರ್ಮಾಣವಾಗಿರುವ ತ್ರಿಕೂಟಮಂಡಿತ ಶಾಂತಿನಾಥ ಬಸದಿ ಮತ್ತು ಈ ಗ್ರಾಮದ ಸುತ್ತಮುತ್ತಲಿನ ಪರಿಸರದ ಯಾವುದೋ ಒಂದು ಗ್ರಾಮದಲ್ಲಿ ಇಪ್ಪತ್ನಾಲ್ಕು ತೀರ್ಥಂಕರರನ್ನು ಒಂದೆಡೆಗೆ ಆರಾಧಿಸುವ ಪರಿಕಲ್ಪನೆಯಲ್ಲಿ ನಿರ್ಮಾಣವಾಗಿದ್ದ ಪಂಚಕೂಟ ಬಸದಿಗಳು ಕನ್ನಡ ನಾಡಿನ ಬಸದಿಗಳ ವಾಸ್ತುಕಲಾ ಅಧ್ಯಯನಕ್ಕೆ ಅಪರೂಪದ ಕೊಡುಗೆಗಳಾಗಿವೆ. ಕಳೆದ ಶತಮಾನದಿಂದೀಚೆಗೆ ಈ ತಾಲೂಕಿನಲ್ಲಿ ಜೈನ ಧರ್ಮೀಯರು ನೆಲೆಸಿರುವ ಕೆಲವು ಗ್ರಾಮಗಳಲ್ಲಿ ಬಸದಿಗಳು ನಿರ್ಮಾಣವಾಗಿವೆ. ಮತ್ತೆ ಕೆಲವು ಗ್ರಾಮಗಳಲ್ಲಿ ನಿರ್ಮಾಣವಾಗುತ್ತಿವೆ. ಇಂದಿನ ಎಲ್ಲ ಬಸದಿಗಳಲ್ಲಿ ಸ್ಥಳೀಯ ಜೈನ ಧರ್ಮೀಯರು ಯುಗಾದಿ ಹಬ್ಬ, ಮಹಾವೀರ ಜಯಂತಿ, ಅಕ್ಷಯ ತದಿಗೆ, ಶ್ರುತ ಪಂಚಮಿ, ಅಷ್ಟಾಹ್ನಿಕ ಪರ್ವ, ನೂಲಶ್ರಾವಣ ಹಬ್ಬ, ದಶಲಕ್ಷಣ ಪರ್ವ, ನವರಾತ್ರಿ, ದೀಪಾವಳಿ, ಗೌರಿಹಬ್ಬ, ಜಿನರಾತ್ರಿ, ನೋಂಪಿ ಪೂಜೆ, ನಂದೀಶ್ವರ ಪರ್ವ ಮೊದಲಾದ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳನ್ನು ಕೈಗೊಳ್ಳುತ್ತಿರುತ್ತಾರೆ.

ಗೋಕಾಕ ತಾಲೂಕಿನಲ್ಲಿ ಬಸದಿಗಳ ನಿರ್ಮಾಣ ಪರಂಪರೆಯೊಂದಿಗೆ ವಿವಿಧ ತೀರ್ಥಂಕರರು, ಯಕ್ಷ-ಯಕ್ಷಿಯರು ಮೊದಲಾದ ಶಿಲ್ಪಗಳ ಪ್ರತಿಷ್ಠಾಪನೆಯೂ ಬೆಳೆದು ಬಂದಿದೆ. ಸಾಮಾನ್ಯವಾಗಿ ಶಿಲ್ಪಗಳ ಪ್ರತಿಷ್ಠಾಪನೆ ಹಲವು ಸಂದರ್ಭಗಳಲ್ಲಿ ಜರುಗಿರುತ್ತದೆ. ಯಾವುದೋ ಒಬ್ಬ ತೀರ್ಥಂಕರನ ಬಸದಿಯನ್ನು ನಿರ್ಮಿಸಿ ಅದರ ಗರ್ಭಗೃಹದಲ್ಲಿ ಆ ತೀರ್ಥಂಕರನ ಶಿಲ್ಪವನ್ನು ಪ್ರತಿಷ್ಠಾಪಿಸಿರುವುದು ಸಾಮಾನ್ಯವಾದ ಸಂಗತಿ. ಕೆಲವೊಮ್ಮೆ ಆಳರಸರಾದಿಯಾಗಿ ಶ್ರಾವಕರು ಬಸದಿಗಳಲ್ಲಿ ವಿವಿಧ ನೋಂಪಿಗಳು, ಪೂಜೆಗಳನ್ನು ಆಚರಿಸಿ ಆ ಬಸದಿಗಳಲ್ಲಿ ಪ್ರತಿಷ್ಠಾಪಿಸಲು ತಮಗೆ ಇಷ್ಟವಾದ ತೀರ್ಥಂಕರರು, ಯಕ್ಷ-ಯಕ್ಷಿಯರು ಇತ್ಯಾದಿ ಪ್ರತಿಮೆಗಳನ್ನು ಮಾಡಿಸಿ ದಾನ ಮಾಡಿರುತ್ತಾರೆ. ಇನ್ನೂ ಕೆಲವೊಮ್ಮೆ ಭಕ್ತಾಧಿಗಳು ತಮ್ಮ ಇಷ್ಟಾರ್ಥಗಳ ಸಿದ್ಧಿಗಾಗಿ ಹರಕೆಹೊತ್ತು ಇಷ್ಟಾರ್ಥಗಳು ಪೂರ್ಣವಾದ ತರುವಾಯ ಶಿಲ್ಪಗಳನ್ನು ಮಾಡಿಸಿ ದಾನ ಮಾಡಿರುತ್ತಾರೆ. ಇಂತಹ ವಿವಿಧ ಸಂದರ್ಭಗಳಲ್ಲಿ ಶಿಲ್ಪಗಳನ್ನು ಪ್ರತಿಷ್ಠಾಪಿಸಿರುವ ಪರಂಪರೆ ಗೋಕಾಕ ತಾಲೂಕಿನಲ್ಲಿಯೂ ಬೆಳೆದು ಬಂದಿದೆ. ಈ ತಾಲೂಕಿನಲ್ಲಿ ಕ್ರಿ. ಶ. ಸುಮಾರು ೭ನೆಯ ಶತಮಾನದಿಂದಲೂ ಬಸದಿಗಳ ನಿರ್ಮಾಣ ಪರಂಪರೆ ಬೆಳೆದು ಬಂದಿದೆ. ಆದರೆ ಆ ಕಾಲದ ಶಿಲ್ಪಗಳು ಬೆಳಕಿಗೆ ಬಂದಿಲ್ಲ. ಗೋಕಾಕದಲ್ಲಿರುವ ಕ್ರಿ. ಶ. ಸುಮಾರು ೧೧ನೆಯ ಶತಮಾನದ ಸುಪಾರ್ಶ್ವನಾಥ ತೀರ್ಥಂಕರನ ಶಿಲ್ಪವೇ ಈ ತಾಲೂಕಿನ ಅತೀ ಪ್ರಾಚೀನ ಜೈನ ಶಿಲ್ಪ. ಈ ತಾಲೂಕಿನಲ್ಲಿ ೨೩ನೆಯ ತೀರ್ಥಂಕರ ಪಾರ್ಶ್ವನಾಥನ ಶಿಲ್ಪಗಳೇ ಅಧಿಕವಾಗಿ ಗೋಚರಿಸುತ್ತವೆ. ಇದಕ್ಕೆ ಪಾರ್ಶ್ವನಾಥ ತೀರ್ಥಂಕರ ಮತ್ತು ಆತನ ಯಕ್ಷಿ ಪದ್ಮಾವತಿಯ ಆರಾಧನೆಗೆ ವಿಶೇಷವಾದ ಒತ್ತುಕೊಟ್ಟಿದ್ದ ಯಾಪನೀಯ ಸಂಘದ ಪ್ರಭಾವವೇ ಮುಖ್ಯ ಕಾರಣ. ಈ ತಾಲೂಕಿನ ದಕ್ಷಿಣದ ಮೇರೆಯಲ್ಲಿರುವ ಸವದತ್ತಿ ತಾಲೂಕಿನ ಎಲ್ಲಮ್ಮದೇವಿ ಗುಡ್ಡದ ಪರಿಸರವು ಯಾಪನೀಯ ಸಂಘದ ಮುನಿಗಳ ಪ್ರಧಾನ ಕೇಂದ್ರವಾಗಿತ್ತು. ಗೋಕಾಕ ತಾಲೂಕಿನಲ್ಲಿ ಆ ಮುನಿಗಳ ವಿಹಾರ ಮತ್ತು ಧರ್ಮಪ್ರಸಾರ ವ್ಯಾಪಕವಾಗಿತ್ತು. ಈ ತಾಲೂಕಿನಲ್ಲಿ ಯಕ್ಷ-ಯಕ್ಷಿಯರ ಸ್ವತಂತ್ರ ಶಿಲ್ಪಗಳು ಬೆರಳೆಣಿಕೆಯಷ್ಟು ಮಾತ್ರ ದೊರೆತಿವೆ.

ಗೋಕಾಕ ತಾಲೂಕಿನಲ್ಲಿ ಕೊಣ್ಣೂರ ಮತ್ತು ಗೋಕಾಕ ಗ್ರಾಮಗಳು ಪ್ರಸಿದ್ಧ ಜೈನ ಕೇಂದ್ರಗಳಾಗಿದ್ದವು. ಈ ಕೇಂದ್ರಗಳಿಗೆ ಅನೇಕ ಮುನಿಗಳು ಮತ್ತು ಶ್ರಾವಕರು ತಮ್ಮ ಜೀವನದ ಕೊನೆಗಾಲದಲ್ಲಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸಮಾಧಿಮರಣವನ್ನಪ್ಪಿ ಮುಕ್ತಿಯನ್ನು ಸಂಪಾದಿಸಲು ಆಗಮಿಸುತ್ತಿದ್ದರು. ಆ ರೀತಿ ಮರಣವನ್ನಪ್ಪಿದವರ ವಿನಯಾರ್ಥವಾಗಿ ನಿಷಿಧಿಗಲ್ಲುಗಳನ್ನು ನಿಲ್ಲಿಸುವ ಪರಂಪರೆ ಪ್ರಚಲಿತದಲ್ಲಿತ್ತು. ಆ ಪರಂಪರೆ ಈ ತಾಲೂಕಿನಲ್ಲಿಯೂ ಇತ್ತೆಂಬುದಕ್ಕೆ ಕೊಣ್ಣೂರದಲ್ಲಿರುವ ನಿಷಿಧಿಗಲ್ಲು ಉತ್ತಮ ನಿದರ್ಶನವಾಗಿದೆ. ಕನ್ನಡ ನಾಡನ್ನಾಳಿದ ವಿವಿಧ ಅರಸು ಮನೆತನಗಳ ಸಾಮ್ರಾಜ್ಯ ವಿಸ್ತರಣೆಯ ಕಾರ್ಯದಲ್ಲಿ ಮತ್ತು ಶಾಂತಿ-ಸುವ್ಯವಸ್ಥೆಯನ್ನು ಸ್ಥಾಪಿಸುವಲ್ಲಿ ವೀರಯೋಧರ ಪಾತ್ರ ಗಮನಾರ್ಹ. ಅಂತಹ ಚಟುವಟಿಕೆಗಳಲ್ಲಿ ಭಾಗವಹಿಸಿ ವೀರಮರಣವನ್ನಪ್ಪಿದವರ ವಿನಯಾರ್ಥವಾಗಿ ವೀರಗಲ್ಲುಗಳನ್ನು ನಿಲ್ಲಿಸುವ ಪರಂಪರೆಯಿತ್ತು. ಜೈನ ಧರ್ಮೀಯರೂ ತಮ್ಮ ಧರ್ಮದ ಸೈದ್ಧಾಂತಿಕ ಚೌಕಟ್ಟಿನೊಳಗೆ ಅಂತಹ ಕಾರ್ಯಗಳಲ್ಲಿ ಭಾಗವಹಿಸಿದ್ದರೆಂಬುದು ಸಮಕಾಲೀನ ಕೆಲವು ಶಾಸನಗಳು ಮತ್ತು ಸಾಹಿತ್ಯಿಕ ಆಕರಗಳಲ್ಲಿ ಪ್ರಸ್ತಾಪಗಳಿವೆ. ಗೋಕಾಕ ತಾಲೂಕಿನಲ್ಲಿ ಜೈನ ವೀರನೊಬ್ಬನು ಅಂತಹ ಯಾವುದೋ ಒಂದು ಚಟುವಟಿಕೆಯಲ್ಲಿ ಭಾಗವಹಿಸಿ ವೀರಮರಣ ಹೊಂದಿರುವುದಕ್ಕೆ ಕೊಣ್ಣೂರದ ಜೈನ ವೀರಗಲ್ಲು ಉದಾಹರಣೆಯಾಗಿದೆ.

ಹೀಗೆ ಗೋಕಾಕ ತಾಲೂಕಿನ ಜೈನ ಶಾಸನಗಳು, ಬಸದಿಗಳು ಮತ್ತು ಶಿಲ್ಪಗಳು ಪ್ರಾದೇಶಿಕವಾಗಿ ಕನ್ನಡ ನಾಡಿನಲ್ಲಿ ಜೈನ ಧರ್ಮದ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ ಅಪಾರವಾದ ಕೊಡುಗೆಗಳನ್ನು ಸಲ್ಲಿಸಿರುವುದು ಈ ಮೇಲಿನ ಅವಲೋಕನದಿಂದ ದೃಢಪಡುತ್ತದೆ. ಹೀಗಾಗಿ ಒಂದು ಧರ್ಮದ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ಕಟ್ಟಿಕೊಡಲು ಈ ಬಗೆಯ ಪ್ರಾದೇಶಿಕವಾಗಿ ಸೂಕ್ಷ್ಮತರ ಅಧ್ಯಯನವನ್ನು ಕೈಗೊಳ್ಳುವುದು ತುಂಬಾ ಅವಶ್ಯವಿದೆ. ಪ್ರಾದೇಶಿಕ ಅಧ್ಯಯನಗಳು ಒಂದು ಧರ್ಮದ ಸಮಗ್ರ ಅಧ್ಯಯನ ಮಾಡುವವರಿಗೆ ಬಹು ಉಪಯುಕ್ತ ಆಕರಗಳಾಗುವುದರಲ್ಲಿ ಸಂದೇಹವೇ ಇಲ್ಲ. ಒಟ್ಟಾರೆ ಗೋಕಾಕ ತಾಲೂಕಿನ ಸಮಗ್ರ ಜೈನ ಪುರಾತತ್ವ ಅವಶೇಷಗಳನ್ನು ಒಂದೆಡೆಗೆ ಕಲೆಹಾಕಿ ವಿಶ್ಲೇಷಿಸಲು ಯತ್ನಿಸಿರುವುದು ಪ್ರಪ್ರಥಮ ಪ್ರಯತ್ನ. ಇಷ್ಟೆಲ್ಲ ಮಹತ್ವದ ವಿಷಯಗಳನ್ನು ಒಳಗೊಂಡಿರುವ ಗೋಕಾಕ ತಾಲೂಕಿನ ಬಹುತೇಕ ಜೈನ ಪುರಾತತ್ವ ಅವಶೇಷಗಳು ಇಂದು ವಿನಾಶದ ಅಂಚಿನಲ್ಲಿವೆ. ಕೆಲವು ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಕಾಲಗರ್ಭದಲ್ಲಿ ಲೀನವಾಗುತ್ತಿವೆ. ಇನ್ನೂ ಕೆಲವು ಸ್ಥಳೀಯರ ವಿವಿಧ ಮೂಢನಂಬಿಕೆಗಳಿಗೆ ಆಹುತಿಯಾಗುತ್ತಿವೆ. ಈ ನಿಟ್ಟಿನಲ್ಲಿ ಸಂಬಂಧಿಸಿದ ಇಲಾಖೆಗಳು ಜನಸಾಮಾನ್ಯರಲ್ಲಿ ಪ್ರಾಚ್ಯಾವಶೇಷಗಳ ಕುರಿತು ಜಾಗೃತಿ ಮೂಡಿಸಿ ಅವುಗಳ ಸಂರಕ್ಷಣೆಯಡೆಗೆ ಗಮನಹರಿಸುವುದು ಅತ್ಯಂತ ಅವಶ್ಯವೆನಿಸುತ್ತದೆ.



# ಆಕರ ಗ್ರಂಥಗಳು


| ಲೇಖಕರು | ಪ್ರಕಟನೆಯ ವರ್ಷ | ಕೃತಿಗಳ ಹೆಸರು ಮತ್ತು ಪ್ರಕಾಶಕರು |
|---|---|---|
| **ಕನ್ನಡ ಕೃತಿಗಳು** | | |
| ಅಕ್ಕಿ ಡಿ. ಎನ್. | ೨೦೦೦ | ಜೈನ ವಿಗ್ರಹಗಳು, ಕವಿಕುಂಚ ಪ್ರಕಾಶನ, ಗೋಗಿಪೇಠ. |
| ಅರ್ಪಣ ಕೂ. ಸ. | ೧೯೯೯ | ದೇವಾಲಯ ವಾಸ್ತುಶಿಲ್ಪ ಪರಿಚಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಎಲಿಗಾರ ಚೆನ್ನಕ್ಕ | ೧೯೯೦ | ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಒಡೆಯರ ಎಸ್. ಎಸ್. (ಪ್ರ.) | ೧೯೭೫ | ಕರ್ನಾಟಕ ಮತ್ತು ಜೈನ ಸಂಸ್ಕೃತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಇಚ್ಚಂಗಿ ರಾಜಶೇಖರ, | ೨೦೦೦ | ಪಾರ್ಶ್ವನಾಥ ಪುರಾಣ : ಒಂದು ತೌಲನಿಕ ಅಧ್ಯಯನ, ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ. |
| ಕಟ್ಟಿ ವೆಂಕಟರಂಗೊ | ೧೯೮೪ | ಧಾರವಾಡ, ಬೆಳಗಾವಿ, ಬಿಜಾಪೂರ, ಕಾನಡಾ ಜಿಲ್ಲೆಗಳ ಗೆಜೆಟಿಯರ್, ಏಶಿಯನ್ ಏಜ್ಯುಕೇಶನ್ ಸರ್ವಿಸಸ್, ನವದೆಹಲಿ. |
| ಕಮಲಾ ಹಂಪನಾ | ೧೯೮೨ | ಅನೇಕಾಂತವಾದ (ಸಂಶೋಧನ ಲೇಖನಗಳು), ವರ್ಧಮಾನ ಪ್ರಕಾಶನ, ಬೆಂಗಳೂರು. |
| | ೨೦೦೩ | ಬದ್ದವಣ (ಜೈನ ಸಾಹಿತ್ಯ-ಸಂಸ್ಕೃತಿ ಶೋಧದ ಪ್ರಬಂಧಗಳು), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. |
| ಕಲಬುರ್ಗಿ ಎಂ. ಎಂ. | ೧೯೯೫<br>೧೯೯೮<br>೨೦೦೪ | ಮಾರ್ಗ ಸಂ. ೧, ೨, ೩ ಮತ್ತು ೪ (ಸಂಶೋಧನ ಪ್ರಬಂಧಗಳ ಸಂಕಲನಗಳು), ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು. |

| | | |
|---|---|---|
| ಕಾಮತ್ ಸೂರ್ಯನಾಥ | ೧೯೯೫ | ಧಾರವಾಡ ಜಿಲ್ಲೆ ಗೆಜೆಟಿಯರ್, ಕರ್ನಾಟಕ ರಾಜ್ಯ ಸರಕಾರ ಮುಖ್ಯ ಸಂಪಾದಕರ ಕಚೇರಿ, ಕರ್ನಾಟಕ ಗೆಜೆಟಿಯರ್, ಬೆಂಗಳೂರು. |
| ಕೆಂಪಣ್ಣವರ ಪಿ. ಜಿ. ಮತ್ತು ಜೋಡಟ್ಟಿ ಟಿ. ಆರ್. (ಸಂ.) | ೧೯೮೦ | ಜೈನ ಕ್ಷೇತ್ರಗಳ ಐತಿಹ್ಯ, ಬಿ. ಬಿ. ಕರ್ಣವಾಡಿ ಮುದ್ರಣಾಲಯ, ಹಾರೂಗೇರಿ. |
| ಗಾಳಿ ಶಿವಾನಂದ ಮತ್ತು ಹೆಗಡೆ ಭದ್ರನ್ ಶ್ರೀಧರ (ಸಂ.) | ೨೦೦೪ | ಜಿನದೃಷ್ಟಿ (ಜೈನ ಧರ್ಮ, ತತ್ವ, ಆಚಾರ, ಸಂಸ್ಕೃತಿ ಸಂಬಂಧಿ ಬರಹಗಳು), ಸುಂದರ ಪುಸ್ತಕ ಪ್ರಕಾಶನ, ಧಾರವಾಡ. |
| | ೨೦೦೫ | ಜಿನತಿಲಕ (ಜೈನ ಸಿದ್ಧಾಂತ ಮತ್ತು ತೀರ್ಥಂಕರ ಮಹಾವೀರರನ್ನು ಕುರಿತ ಲೇಖನಗಳ ಸಂಗ್ರಹ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಗೋಪಾಲ ಬಿ. ಆರ್. | ೧೯೯೩ | ಕರ್ನಾಟಕದ ಕಲೆಗಳು ಸಂ.೪, ವಾಸ್ತು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ಗೋಪಾಲರಾವ್ ಎಚ್. ಎಸ್. | ೧೯೯೩ | ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣದ ಚಾಲುಕ್ಯರ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. |
| ಚಂದ್ರಪೂಜಾರಿ ಎಂ. | ೨೦೦೫ | ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಚಿದಾನಂದಮೂರ್ತಿ ಎಂ. | ೨೦೦೨ (ಪುನರ್ಮುದ್ರಣ) | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಸಂ. ೧, ಸಪ್ನ ಬುಕ್ ಹೌಸ್, ಬೆಂಗಳೂರು. |
| ತಂಬಂಡ ವಿಜಯ ಪೂಣಚ್ಚ (ಸಂ.) | ೨೦೦೧ | ಚರಿತ್ರೆ (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ -೪), ಕನ್ನಡ ವಿಶ್ವವಿದ್ಯಾಲಯ ಹಂಪಿ. |
| ತರೀಕೆರೆ ರಹಮತ್ (ಸಂ.) | ೨೦೦೦ | ಧರ್ಮ (ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ -೩), ಕನ್ನಡ ವಿಶ್ವವಿದ್ಯಾಲಯ ಹಂಪಿ. |
| ತಿಪ್ಪೇರುದ್ರಸ್ವಾಮಿ ಎಚ್. | ೧೯೯೭ | ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು. |

| | | |
|---|---|---|
| ತೆಲಗಾವಿ ಲಕ್ಷ್ಮಣ್ (ಸಂ.) | ೨೦೦೪ | ಮೌರ್ಯ ಮತ್ತು ಶಾತವಾಹನ ಯುಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ದಿಬ್ಬದ ಶಾಂತಿನಾಥ | ೨೦೦೩ | ಜೈನ ಸಂಸ್ಕೃತಿ ಸಮೀಕ್ಷೆ, ರತ್ನತ್ರಯ ಪ್ರಕಾಶನ, ಗುಲಬರ್ಗಾ. |
| | ೨೦೦೫ | ಆಗಮಿಕ (ಜೈನ ಶೋಧ ಪ್ರಬಂಧಗಳ ಸಂಕಲನ), ಮುರುಗ ಪ್ರಕಾಶನ, ಗುಲಬರ್ಗಾ. |
| ನರಸಿಂಹನ್ ಅ. ಲ. ಮತ್ತು ಮರಿಶಾಮಾಚಾರ್ ಎನ್. (ಸಂ.) | ೧೯೯೪ | ಶಿಲ್ಪಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. |
| ನರಸಿಂಹಮೂರ್ತಿ ಎ. ವಿ. | ೧೯೭೧ | ಕರ್ನಾಟಕದ ಸೇವುಣರ ಇತಿಹಾಸ, ಮೈಸೂರು |
| ನಾಗಯ್ಯ ಜೆ. ಎಂ. | ೧೯೯೨ | ಆರನೆಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ. |
| ನಿರುಪಮಾ | ೨೦೦೨ | ಸಂಶೋಧನಾ ವಿಧಾನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ನೇಗಿನಹಾಳ ಎಂ. ಬಿ. | ೧೯೯೯ | ನೇಗಿನಹಾಳ ಪ್ರಬಂಧಗಳು (ಸಂಶೋಧನ ಲೇಖನಗಳ ಸಂಗ್ರಹ), ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಪಂಡಿತ ದೇವಕುಮಾರ | ೧೯೯೮ | ಜಿನಾಲಯ, ಚಂದ್ರಾ ಕಾಫೀ ಹೌಸ್, ಆಗ್ರಾ. |
| ಪಂಚಮುಖಿ ಆರ್. ಎಸ್. | ೧೯೪೬ | ಕರ್ನಾಟಕದ ಅರಸು ಮನೆತನಗಳು, ಧಾರವಾಡ. |
| ಪ್ರಭಾಕರ ಎಂ.ಎನ್. | ೨೦೦೦ | ದೇವಾಲಯ ವಾಸ್ತು ಚಂದ್ರಿಕೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಪಾಟೀಲ ಮನೋಜ | ೧೯೮೬ | ಬೆಳಗಾವಿ ಜಿಲ್ಲಾ ಮಾರ್ಗದರ್ಶಿ, ಪವನ ಪ್ರಕಾಶನ, ಬೆಳಗಾವಿ. |
| ಪಾಟೀಲ ಶಿ. ಬಾ. | ೧೯೯೫ | ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ, ಬಸವಶ್ರೀ ಪ್ರಕಾಶನ, ಸಂಕೇಶ್ವರ. |
| ಭುಜಬಲಿಶಾಸ್ತ್ರಿ ಕೆ. | ೧೯೬೯ | ಪ್ರಬಂಧಪುಂಜ (ಲೇಖನಗಳು), ದೇವೇಂದ್ರಕುಮಾರ ಹದಳಗಿ, ಧಾರವಾಡ. |

| | | |
|---|---|---|
| ಮಹೀಷವಾಡಿ ಅಶೋಕ ಭು. | ೨೦೦೦ | ಓಂ ಶ್ರೀ ಜಿನಸೂತ್ರ, ದಿಗಂಬರ ಜೈನ ಸಮಾಜ, ಕೋಥಳಿ, ತಾ. ಚಿಕ್ಕೋಡಿ. |
| ಮಹೀಷವಾಡಿ ಬಿ. ಬಿ. | ೧೯೭೭ | ಜೈನ ವಾಙ್ಮಯ ಪರಿಶೋಧನೆ (ಸಂಶೋಧನ ಲೇಖನಗಳ ಸಂಗ್ರಹ), ಜ್ಞಾನ ವಿಕಾಸ ಪ್ರಕಾಶನ, ಧಾರವಾಡ. |
| ಮಿರ್ಜಿ ಅಣ್ಣಾರಾಯ (ಅನು.) | ೧೯೮೧ | ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ, ಜೈನ ಸಂಸ್ಕೃತಿ ಸಂರಕ್ಷಕ ಸಂಘ, ಸೊಲ್ಲಾಪುರ. |
| | ೧೯೯೭ (ಪುನರ್ಮುದ್ರಣ) | ಜೈನಧರ್ಮ, ಶಾಂತಿಸೇವಾ ಸದನ, ಶೇಡಬಾಳ. |
| ವಸಂತಕುಮಾರಿ | ೨೦೦೩ | ಇತಿಹಾಸದ ಹಾದಿಯಲ್ಲಿ, ವಸು ಪ್ರಕಾಶನ, ಮೈಸೂರು. |
| ಶುಭಚಂದ್ರ | ೧೯೭೬ | ಜೈನ ಸಾಹಿತ್ಯ ಮತ್ತು ಸಂಸ್ಕೃತಿ :ಕೆಲವು ಅಧ್ಯಯನಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. |
| ಶೆಟ್ಟಿ ಎಸ್. ಡಿ. | ೧೯೯೯ | ಜೈನ ಬಸದಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಶ್ರೀನಿವಾಸ್ ಎಂ. ವಿ. | ೧೯೭೨ | ಸೌಂದತ್ತಿಯ ರಟ್ಟರು, ಐ. ಬಿ. ಎಚ್. ಪ್ರಕಾಶನ, ಬೆಂಗಳೂರು. |
| ಸಿಂದಗಿ ರಾಜಶೇಖರ | ೧೯೮೮ | ಕರ್ನಾಟಕದ ವಾಸ್ತು, ಶಿಲ್ಪ ಮತ್ತು ಚಿತ್ರಕಲೆ, ಸುಜಾತಾ ಪ್ರಕಾಶನ, ಧಾರವಾಡ. |
| ಹಂಜೆ ಅಪ್ಪಣ್ಣ ಎನ್. | ೨೦೦೮ | ಧಾರವಾಡ ಪರಿಸರದಲ್ಲಿ ಜೈನಧರ್ಮ, ಭಾರತೀಯ ಜೈನ ಮಿಲನ್, ಬಾಣಸವಾಡಿ ಶಾಖೆ, ಬೆಂಗಳೂರು. |
| ಹಂದೂರ ಬಿ. ಆರ್. | ೨೦೦೩ | ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ ಶ್ರೀ ಅಜಿತ ಕುಚನೂರೆ, ವಿಜಾಪುರ. |
| ಹಂಪ ನಾಗರಾಜಯ್ಯ | ೧೯೭೬ | ಯಕ್ಷಯಕ್ಷಿಯರು, ಚಂದ್ರಸಾಗರವರ್ಣಿ ಗ್ರಂಥಮಾಲೆ, ಬೆಂಗಳೂರು. |
| | ೧೯೯೭ | ಚಂದ್ರಕೊಡೆ (ಸಂಶೋಧನ ಲೇಖನಗಳ ಸಂಗ್ರಹ), ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| | ೧೯೯೮ | ಶಾಸನಗಳಲ್ಲಿ ಬಸದಿಗಳು, ರತ್ನತ್ರಯ ಪ್ರಕಾಶನ, ಮೈಸೂರು. |
| ಹಿರೇಮಠ ಬಿ. ಆರ್. | ೧೯೮೭ | ಕರ್ನಾಟಕದ ಶಾಸನಗಳಲ್ಲಿ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |

ಇಂಗ್ಲೀಷ್ ಕೃತಿಗಳು


| | | |
|---|---|---|
| Desai P. B. (edi.) | 1957 | Jainism in South India and Some Jaina Epigraphs, Sholapur. |
| Desai P. B., Ritti S. H., Gopal B. R. (edi.) | 1970 | A History of Karnataka, Karnatak University, Dharwad. |
| Dhaky M. A. | 1977 | Indian Temple Forms in Karnataka (Inscriptions and Arctitecture), Abhinav Publications, Delhi. |
| Gosta Liebert | 1986 | Icnographic Dictionery of the Indian Relgions : Hinduism-Buddhism-Jainism, Sri satguru Publications, Delhi. |
| Gopinath Rao T. A. | 1971 | Elements of Hindu Iconography Vol. I to IV, Indological Book House,Varanasi, Delhi. |
| Gupte R. S. | 1972 | Iconography of the Hindus Buddhists and Jains, D. B. Taraporeval Sons and Co. Private Ltd., Bombay. |
| James M. Campbell (edi) | 2004 (Reprint) | Gazetteer of Belgaum, Govt. of Karnataka, Bangalore. |
| Kalghatgi T. G. (edi.) | 1977 | Jainism and Karnataka Culture, Karnatak University, Dharwad. |
| Saletore B. A. | 1938 | Mediaeval Jainism, Bombay. |
| Sangave V. A. | 1959 | Jaina Community- A Social Survey, Bombay. |
| Sharma S. R. | 1940 | Jainism and Karnataka Culture, Karnataka Historical Research Society, Dharwad. |

## ಕನ್ನಡ ಮತ್ತು ಇಂಗ್ಲೀಷ್ ಸಂಶೋಧನ ಲೇಖನಗಳು


| | | |
|---|---|---|
| ಅನಂತರಂಗಾಚಾರ್ ಎನ್. | ೧೯೫೪ | "ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ", ಬಾಗಿನ (ಶ್ರೀ ಎಸ್. ವಿ. ರಂಗಣ್ಣನವರ ಸ್ಮರಣ ಸಂಚಿಕೆ), ಮಹಾರಾಜಾ ಕಾಲೇಜು, ಮೈಸೂರು. |
| ಗುರುರಾಜರಾವ್ ಬಿ. ಕೆ. | ೧೯೮೦ | "ಭಾರತೀಯ ವಾಸ್ತು ಶೈಲಿಗಳು", ಅಧ್ಯಯನ (ಶಂ. ಬಾ. ಜೋಶಿ ಅಭಿನಂದನ ಗ್ರಂಥ), ಚಿದಾನಂದಮೂರ್ತಿ ಎಂ. (ಸಂ.), ಬೆಂಗಳೂರು. |
| ಭುಜಬಲಿಶಾಸ್ತ್ರಿ ಕೆ. | | "ದೇವಾಲಯ ಮತ್ತು ಮೂರ್ತಿಗಳ ಉತ್ಪತ್ತಿ", ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೩೦ ಸಂ.೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ಮೂರ್ತಿ ಸಿ. ರಾ. ನ. | ೧೯೮೪ | "ಕರ್ನಾಟಕದ ಶಿಲ್ಪಕಲೆಯಲ್ಲಿ ಶಿಲಾವೈಶಿಷ್ಟ್ಯ", ಕರ್ನಾಟಕ ವಿದ್ಯಾವೈಭವ (ಶ್ರೀ ಜಿ. ಬಿ. ಶಂಕರರಾಯರು ಸಂಭಾವನಾ ಗ್ರಂಥ), ಆದ್ಯ ರಾಮಾಚಾರ್ಯ (ಸಂ.), ವರದರಾಜ ಪ್ರಕಾಶನ, ಬೆಂಗಳೂರು. |
| ರಘುನಾಥಭಟ್ ಎಚ್. ಆರ್. | ೧೯೯೯ | "ಪ್ರಾಚೀನ ಕರ್ನಾಟಕದ ವಾಸ್ತುಶಿಲ್ಪಕಲೆ", ಕನಕಸಿರಿ (೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂಸ್ಮರಣ ಸಂಚಿಕೆ),ಗೋಪಾಲರಾವ್ ಎಚ್. ಎಸ್. (ಸಂ.) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ಸುಂದರ ಅ. | ೧೯೮೧ | "ಸಾಹಿತ್ಯ ಮತ್ತು ವಾಸ್ತುಶಿಲ್ಪ", ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ಹಂಪೆ ಅಪ್ಪಣ್ಣ ಎನ್. | ೨೦೦೭ | "ಜೈನ ಶಿಲ್ಪಗಳು : ಹಿನ್ನೆಲೆ ಮತ್ತು ಲಕ್ಷಣಗಳು", ರತ್ನಕರಂಡಕ (ಡಾ. ಎಚ್.ಎ. ಪಾರ್ಶ್ವನಾಥ ಅಭಿನಂದನ ಗ್ರಂಥ), ಪು. ೩೨೬-೩೪೬. |

| | | |
|---|---|---|
| | ಜೂನ್-೨೦೦೮ | "ಸಾಹಿತ್ಯ ಮತ್ತು ಶಾಸನಗಳಲ್ಲಿ ಭದ್ರಬಾಹು ಭಟ್ಟಾರಕರು ಮತ್ತು ಚಂದ್ರಗುಪ್ತ", ಅರವಂಟಿಗೆ ಸಂ. ೧ / ೧ , ಪು. ೧೦-೧೯, ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ. |
| | ೨೦೦೮ (ಜನವರಿ-ಡಿಸೆಂಬರ್) | "ಗೋಕಾಕ ತಾಲೂಕಿನ ಶಾಸನಗಳು", ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೮೬ / ೧೧-೦೪, ಪು. ೧೧-೧೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| Padigar Shrinivas V. | 2000 | "Art Aspects of Nisidhi Memorials", Jinamanjari Vol. 21 No.1, Nagarajaiah Hampa (edi.), United States and Canada. |
| | 2007 January-June | "Concept and Art : Vicissitudes of Jinachaitys and Jina-chaityalayas in Karnataka", Deccan Studies Vol. V/1, pp. 62-100, Hyderabad. |
| | 2006-07 | "Some Aspects of Jina-caityalayas of Karnataka", Kala (The Journal of Indian Art History Congress Vol. XII), pp. 38-43, Guwahati. |

**ನಿಯತಕಾಲಿಕೆಗಳು**

೧. ಅರವಂಟಿಗೆ, ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ.

೨. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೩. ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ಪ್ರಬುದ್ಧ ಕರ್ನಾಟಕ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೫. ಮಾನವಿಕ ಕರ್ನಾಟಕ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬. ಶಾಸನ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಜರ್ನಲ್ ಆಫ್ ಬಾಂಬೆ ಬ್ರ್ಯಾಂಚ್ ರಾಯಲ್ ಏಶಿಯಾಟಿಕ್ ಸೊಸೈಟಿ ಆಫ್ ಬಾಂಬೆ.



# ಛಾಯಾಚಿತ್ರಗಳು



೧. ಕೊಣ್ಣೂರ : ಕ್ರಿ. ಶ. ೧೦೮೭ರ ಶಾಸನ ಶಿಲೆ



೨. ಕಲ್ಲೊಳ್ಳಿ : ಕ್ರಿ. ಶ. ೧೨೦೪ರ ಶಾಸನ ಶಿಲೆ



೩. ಕೊಣ್ಣೂರ : ಭದ್ರಬಾಹು ಭಟ್ಟಾರಕರು ತಪಸ್ಸು ಮಾಡಿದ ಗುಂಫಾಗಳು



೪. ಕೊಣ್ಣೂರ : ಪಾರ್ಶ್ವನಾಥ ಬಸದಿಯ ಅಂತರಾಳದ ಮುಂಭಾಗ



೫. ಕೊಣ್ಣೂರ : ಪಾರ್ಶ್ವನಾಥ ಬಸದಿಯ ಅಧಿಷ್ಠಾನ



೬. ಕೊಣ್ಣೂರ : ಪಾರ್ಶ್ವನಾಥ ಬಸದಿಯ ಭಿತ್ತಿ



೭. ಕೊಣ್ಣೂರ : ಪಾರ್ಶ್ವನಾಥ ಬಸದಿಯ ಗರ್ಭಗೃಹದ ಹಿಂಭಾಗದ ಭಿತ್ತಿ



೮. ಕೊಣ್ಣೂರ : ಪಾರ್ಶ್ವನಾಥ ಬಸದಿಯ ಮಂಭಾಗ (ಜೀರ್ಣೋದ್ಧಾರ)



೯. ಕಲ್ಲೊಳೆ : ಶಾಂತಿನಾಥ ಬಸದಿಯ ಪ್ರಧಾನ ಗರ್ಭಗೃಹದ ದ್ವಾರಬಂಧ



೧೦. ಕಲ್ಲೊಳೆ : ಶಾಂತಿನಾಥ ಬಸದಿಯ ಪಶ್ಚಿಮಾಭಿಮುಖವಾಗಿರುವ ಅಂತರಾಳದ ದ್ವಾರಬಂಧ



೧೧. ಕಲ್ಲೊಳೆ : ಶಾಂತಿನಾಥ ಬಸದಿಯ ಪೂರ್ವಾಭಿಮುಖವಾಗಿರುವ ಅಂತರಾಳದ ದ್ವಾರಬಂಧ



೧೨. ಕಲ್ಲೊಳೆ : ಶಾಂತಿನಾಥ ಬಸದಿಯ ನವರಂಗದಲ್ಲಿರುವ ದೇವಕೋಷ್ಠ



೧೫. ಕಲ್ಲೊಳೆ : ಶಾಂತಿನಾಥ ಬಸದಿಯ ಪಶ್ಚಿಮಾಭಿಮುಖವಾಗಿರುವ

ಗರ್ಭಗೃಹದ ವಿತಾನ



೧೬. ಕಲ್ಲೊಳೆ : ಶಾಂತಿನಾಥ ಬಸದಿಯ ನವರಂಗದ ವಿತಾನ



೧೭. ಕಲ್ಲೊಳೆ : ಶಾಂತಿನಾಥ ಬಸದಿಯ ಅಧಿಷ್ಠಾನ



೧೮. ಕಲ್ಲೊಳೆ : ಶಾಂತಿನಾಥ ಬಸದಿಯ ಪೂರ್ವದ ಗರ್ಭಗೃಹದ ಹಿಂಭಾಗದ ಭಿತ್ತಿ



೧೯. ಕಲ್ಲೊಳೆ : ಶಾಂತಿನಾಥ ಬಸದಿಯ ಪ್ರಧಾನ ಗರ್ಭಗೃಹದ ಮೇಲಿರುವ

ಫಾಂಸನಾ ಶೈಲಿಯ ಶಿಖರ



೨೦. ಕಲ್ಲೊಳೆ : ಶಾಂತಿನಾಥ ಬಸದಿಯ ಮುಂಭಾಗ (ಮುಖಮಂಟಪ)



೨೧. ಕಲ್ಲೊಳೆ : ಶಾಂತಿನಾಥ ಬಸದಿಯ ಪಾರ್ಶ್ವನೋಟ



೨೨. ಕಲ್ಲೊಳೆ : ಶಾಂತಿನಾಥ ಬಸದಿಯ ತಲವಿನ್ಯಾಸ



೨೩. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ಗರ್ಭಗೃಹದ ದ್ವಾರಬಂಧದ ಲಲಾಟ ಪಟ್ಟಿಯಲ್ಲಿರುವ ಜಿನಬಿಂಬ



೨೪. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ಅಂತರಾಳದ ದ್ವಾರಬಂಧದ ಉತ್ತರಾಂಗಣದ ಮಾಲ್ಭಾಗದಲ್ಲಿರುವ ಕಾಯೋತ್ಸರ್ಗ ತೀರ್ಥಂಕರರ ಸಾಲು



೨೫. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ನವರಂಗ



೨೬. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ಮುಖಮಂಟಪದ ವಿತಾನ



೨೭. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ಮುಂಭಾಗ



೨೮. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ಮುಖಮಂಟಪ



೨೯. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ಮುಖಮಂಟಪದ ಪಾರ್ಶ್ವನೋಟ



೩೦. ಯಾದವಾಡ : ಕಾಶಿ ಈಶ್ವರಲಿಂಗ ದೇವಾಲಯದ ತಲವಿನ್ಯಾಸ



೩೧. ಗೋಕಾಕ : ಸುಪಾರ್ಶ್ವನಾಥ

ತೀರ್ಥಂಕರನ ಶಿಲ್ಪ



೩೨. ಕಲ್ಲೊಳ್ಳಿ : ಚಂದ್ರಪ್ರಭನಾಥ

ತೀರ್ಥಂಕರನ ಶಿಲ್ಪ



೩೩. ಕಲ್ಲೊಳೆ : ಶಾಂತಿನಾಥ ತೀರ್ಥಂಕರನ ಶಿಲ್ಪ



೩೪. ಕಲ್ಲೊಳೆ : ನೇಮಿನಾಥ ತೀರ್ಥಂಕರನ ಶಿಲ್ಪ



೩೫. ಗೋಕಾಕ : ಪಾರ್ಶ್ವನಾಥ ತೀರ್ಥಂಕರನ ಶಿಲ್ಪ



೩೬. ಕಲ್ಹೊಳೆ : ಪಾರ್ಶ್ವನಾಥ ತೀರ್ಥಂಕರನ ಶಿಲ್ಪ



೩೭. ಯಾದವಾಡ : ಪಾರ್ಶ್ವನಾಥ

ತೀರ್ಥಂಕರನ ಶಿಲ್ಪ



೩೮. ಕುಲಗೋಡ : ಪಾರ್ಶ್ವನಾಥ

ತೀರ್ಥಂಕರನ ಶಿಲ್ಪ



೩೯. ಗೋಕಾಕ : ಚೌವ್ವೀಸ ತೀರ್ಥಂಕರರ ಶಿಲ್ಪ



೪೦. ಯಾದವಾಡ : ಚೌವ್ವೀಸ ತೀರ್ಥಂಕರರ ಪ್ರತಿಮೆ



೪೧. ಯಾದವಾಡ : ಪಂಚಪರಮೇಷ್ಠಿ ಶಿಲ್ಪ



೪೨. ಗೋಕಾಕ : ಧರಣೇಂದ್ರ ಯಕ್ಷನ ಶಿಲ್ಪ



೪೩. ಕಲ್ಲೊಳೆ : ಸರಸ್ವತಿಯ ಶಿಲ್ಪ



೪೪. ಕೊಣ್ಣೂರ : ನಿಷಿಧಿಶಾಸನ ಸ್ತಂಭ



೪೫. ಕೊಣ್ಣೂರ : ಜೈನ ವೀರಗಲ್ಲು



೪೬. ಕುಲಗೋಡ : ಜೈನ ಶಾಸನ ಶಿಲೆ (ಅಪ್ರಕಟಿತ)

